# PARANTAPAVIJAYA

# ಪರಂತಪವಿಜಯ

BY

M. VENKATAKRISHNAYYA

(SECOND EDITION)

MYSORE:
PRINTED AT THE G.T.A. PRESS
1914



PRICE 9 ANNAS] [ಕ್ರಯ ೯ ಆಣೆ

# PARANTAPAVIJAYA

# ಪರಂತಪವಿಜಯ

(SECOND EDITION)

BY

M VENKATAKRISHNAYYA

MYSORE:
PRINTED AT THE G. T. A. PRESS
1914

# ಪೀಠಿಕೆ.

ದ್ಯೂತದಿಂದ ಪ್ರಪಂಚದಲ್ಲಿ ಅನೇಕ ಅನರ್ಥಗಳು ನಡೆಯುವುವು. ಸಂಸ್ಥಾನಗಳೇ ಮುಳುಗಿಹೋಗುವುವು. ಮಣ್ಣು, ಹೊನ್ನು, ಹೆಣ್ಣುಗಳನ್ನಪಹರಿಸಬೇಕೆಂಬ ದುರಾಶೆಯಿಂದ ಅನೇಕ ಅನರ್ಥಗಳಾಗುವುವು. ಇಂಥ ದುರಾಶಾಪ್ರತಿನಿವಿಷ್ಟರಾದವರು, ತಮ್ಮ ದುರಾಶೆಯ ಪರಿಣಾಮಾವಸ್ಥೆಯನ್ನು ಪರ್ಯಾಲೋಚಿಸದೆ, ಆಶಾಗ್ರಹಪ್ರತಿನಿವಿಷ್ಟರಾಗಿ ಹೇಗೆ ಅನರ್ಥಕ್ಕೆ ಗುರಿಯಾಗುವರೋ, ಸನ್ಮಾರ್ಗಾವಲಂಬನೆಯು ಇಂಥ ಅನರ್ಥಗಳನ್ನು ಹೇಗೆ ತಪ್ಪಿಸುವುದೋ, ಅವುಗಳನ್ನು ವಿಶದಪಡಿಸುವುದು ಬಹಳ ಅವಶ್ಯಕವಾದುದು. ಅತ್ಯುತ್ಕಟವಾದ ಪಾಪಗಳಿಗೆ ಈ ಜನ್ಮದಲ್ಲಿಯೇ ಶಿಕ್ಷೆಯಾಗುವುದೆಂಬುದಾಗಿಯೂ, ಅತ್ಯುತ್ತಮವಾದ ಧರ್ಮಗಳಿಗೂ ಫಲವು ಈ ಜನ್ಮದಲ್ಲಿಯೇ ಆಗುವುದೆಂಬುದಾಗಿಯೂ, ನಮ್ಮ ಹಿರಿಯರು ಹೇಳಿರುವರು. ಇಂಥ ಪಾಪಪುಣ್ಯಗಳ ಫಲಗಳು ಯಾವ ರೀತಿಯಲ್ಲಿ ಸಂಭವಿಸುವವೋ, ಅವುಗಳನ್ನು ಇತಿಹಾಸರೂಪವಾಗಿ ಪ್ರದರ್ಶನ ಮಾಡುವುದಕ್ಕೋಸ್ಕರ ಈ ಗ್ರಂಥವು ರಚಿಸಲ್ಪಟ್ಟಿತು. ಈ ಉದ್ದೇಶವನ್ನು ನೆರವೇರಿಸುವ ವಿಷಯದಲ್ಲಿ ಈ ಗ್ರಂಥವು ಸಾಧಕವಾದುದೆಂದು ವಾಚಕರಿಂದ ಗಣಿಸಲ್ಪಟ್ಟರೆ, ಈ ವಿಷಯದಲ್ಲಿ ಮಾಡಿದ ಪ್ರಯತ್ನವು ಸಂಪೂರ್ಣವಾದ ಫಲವನ್ನು ಹೊಂದಿತೆಂದು ಭಾವಿಸಲ್ಪಡುವುದು.

M. V.

॥ ಶ್ರೀಃ ॥

# ಪರಂತಪ ವಿಜಯ.

## ಅಧ್ಯಾಯ. ೧.

ಈ ಭರತಖಂಡದ ಈಶಾನ್ಯ ಭಾಗದಲ್ಲಿ ಗಂಧರ್ವಪುರಿಯೆಂಬ ಒಂದು ಪಟ್ಟಣವಿರುವುದು. ಇದು, ದ್ಯೂತ ಪಾನ ವ್ಯಭಿಚಾರ ಮೊದಲಾದ ದುರ್ವೃತ್ತಿಗಳಿಗೆ ಮುಖ್ಯಸ್ಥಾನವಾಗಿದ್ದಿತು. ಇದರಲ್ಲಿ ಚೌರ್ಯ ಮೊದಲಾದ ದುರ್ವೃತ್ತಿಗಳಿಂದ ದ್ರವ್ಯವನ್ನಾರ್ಜಿಸಿ, ಅದನ್ನು ದ್ಯೂತ ವ್ಯಭಿಚಾರಗಳಲ್ಲಿ ಕಳೆಯತಕ್ಕವರು ಅನೇಕರಿದ್ದರು. ಇಲ್ಲಿನ ದ್ಯೂತಶಾಲೆಗಳು, ವಿಶಾಲವಾದ ಅರಮನೆಗಳಂತೆ ಕಾಣಿಸುತಿದ್ದುವು. ಈ ದ್ಯೂತಶಾಲೆಗಳಲ್ಲಿ, ಪ್ರತಿಕ್ಷಣದಲ್ಲಿಯೂ ಕೋಟ್ಯಂತರ ದ್ರವ್ಯಗಳು ಒಬ್ಬರಿಂದೊಬ್ಬರಿಗೆ ಸೇರುತಿದ್ದುವು. ಭಾಗ್ಯಲಕ್ಷ್ಮಿಯು ಅತಿ ಚಂಚಲೆಯೆಂಬುದಕ್ಕೆ ದೃಷ್ಟಾಂತಗಳು, ಈ ಪಟ್ಟಣದಲ್ಲಿ ವಿಶೇಷವಾಗಿ ಸಿಕ್ಕುತಿದ್ದುವು. ಈ ಪಟ್ಟಣದ ಮಧ್ಯಭಾಗದಲ್ಲಿ ಅತಿ ವಿಸ್ತಾರವಾಗಿಯೂ ಅತ್ಯುನ್ನತವಾದ ಉಪ್ಪರಿಗೆಗಳಿಂದ ಶೋಭಿತವಾಗಿಯೂ ಇದ್ದ ಒಂದಾನೊಂದು ಮನೆಯು, ಇಲ್ಲಿನ ದ್ಯೂತಶಾಲೆಗಳಲ್ಲೆಲ್ಲ ಪ್ರಧಾನವೆನ್ನಿಸಿಕೊಂಡಿದ್ದಿತು. ಈ ಗೃಹಕ್ಕೆ, ದುರ್ಲಲಿತನೆಂಬ ಒಬ್ಬ ಯಜಮಾನನಿದ್ದನು. ಇವನು, ತನ್ನ ಮನೆಯಲ್ಲಿ ದ್ಯೂತವಾಡಿ ಗೆದ್ದವರು ಗೆದ್ದ ಹಣದಲ್ಲಿ ತನಗೆ ಇಪ್ಪತ್ತರಲ್ಲೊಂದುಪಾಲನ್ನು ಕೊಡಬೇಕೆಂದು ನಿರ್ಣಯಿಸಿದ್ದನು. ಈ ರೀತಿ

ಯಲ್ಲಿ ತೆಗೆದುಕೊಳ್ಳಲ್ಪಡತಕ್ಕ ದ್ರವ್ಯವೇ, ತಿಂಗಳಿಗೆ ೨೫ ಲಕ್ಷ ರೂಪಾಯಿಗಳವರೆಗೆ ಆಗುತ್ತಿದ್ದಿತು. ಈ ದ್ರವ್ಯದಲ್ಲಿ ಇವನು ತನ್ನ ಸ್ವಂತಕ್ಕಾಗಿ ೫ ಲಕ್ಷ ರೂಪಾಯಿಗಳನ್ನು ತೆಗೆದಿಟ್ಟುಕೊಂಡು, ಉಳಿದ ೨೦ ಲಕ್ಷ ರೂಪಾಯಿಗಳನ್ನು ಆ ದ್ಯೂತಗೃಹಕ್ಕೆ ಬರತಕ್ಕವರ ಸಕಲ ಸೌಕರ್ಯಾರ್ಥವಾಗಿ ಉಪಯೋಗಿಸುತ್ತಿದ್ದನು. ಈ ಗೃಹದಲ್ಲಿ ಕ್ಷಣಮಾತ್ರ ವಾಸಮಾಡುವುದೂ ಅನೇಕ ವರ್ಷಗಳ ಸ್ವರ್ಗಸುಖಾನುಭವಕ್ಕೆ ಸಮಾನವಾದುದೆಂದು, ಅಲ್ಲಿಗೆ ಬರತಕ್ಕವರು ಭಾವಿಸುತ್ತಿದ್ದರು. ಈ ಮನೆಯ ಸುತ್ತಲೂ, ಫಲಪುಷ್ಪಭರಿತವಾಗಿ ಚಿತ್ರವಿಚಿತ್ರಗಳಾದ ಅನೇಕ ವೃಕ್ಷಗಳಿಂದ ರಮಣೀಯವಾಗಿರುವ ಉದ್ಯಾನವನವು ಪ್ರಕಾಶಿಸುತ್ತಿದ್ದಿತು. ಇದರೊಳಗೆ ಅಲ್ಲಲ್ಲಿಯೇ ಆಮೋದಭರಿತಗಳಾದ ಲತೆಗಳಿಂದ ಶೋಭಿತವಾಗಿರುವ ಲತಾಗೃಹಗಳೂ, ಅವುಗಳಲ್ಲಿ ವಿಶ್ರಮಿಸಿಕೊಳ್ಳುವುದಕ್ಕೆ ಅನುಕೂಲಗಳಾದ ಶಯನಾಸನಗಳೂ, ಅತಿ ಮನೋಹರಗಳಾಗಿ ಸಜ್ಜುಗೊಳಿಸಲ್ಪಟ್ಟಿದ್ದುವು. ಈ ಲತಾಗೃಹಗಳೊಳಗೊಂದರ ಬಳಿಯಲ್ಲಿ, ಒಂದುದಿನ ಸಂಧ್ಯಾಕಾಲದಲ್ಲಿ, ಮಾಧವನೆಂಬ ದೊಡ್ಡ ಮನುಷ್ಯನೊಬ್ಬನು ವಿಹಾರಾರ್ಥವಾಗಿ ಸಂಚರಿಸುತ್ತಿದ್ದನು. ಈತನ ಉಡುಗೆ ತೊಡುಗೆಗಳಿಂದಲೇ, ಇವನು ಕೋಟೀಶ್ವರನೆಂದು ತಿಳಿಯಬಹುದಾಗಿದ್ದಿತು. ಈತನ ಮುಖಭಾವವು, ಇವನು ವಿಚಾರಪರನೆಂಬುದನ್ನು ಪ್ರದರ್ಶನಮಾಡುತ್ತಿದ್ದಿತು. ಹೀಗಿರುವಲ್ಲಿ, ಅಲ್ಲಿಗೆ, ಸುಂದರಾಕಾರನಾಗಿಯೂ, ಯೌವನಸ್ಥನಾಗಿಯೂ, ಆಜಾನುಬಾಹುವಾಗಿಯೂ ಇದ್ದ, ಪರಂತಪನೆಂಬ ಮಹನೀಯನೊಬ್ಬನು ಬಂದನು. ಈತನಲ್ಲಿ, ಸತ್ಯ ಧರ್ಮ ಶಾಸ್ತ್ರಗಳೆಂಬ ಮೂರುಗುಣಗಳೂ ಮೂರ್ತಿಮತ್ತಾಗಿದ್ದಂತೆ ಕಾಣಬರುತ್ತಿದ್ದುವು. ಇವನು ಆ ವುಪವನದ ಸೊಬಗನ್ನು ನೋಡುತ ಆ ಲತಾಗೃಹದ ಬಳಿಗೆ ಬರಲು, ಅಲ್ಲಿ ಸಂಚರಿಸುತ್ತಿದ್ದ ಮಾಧವನು, ಇವನ ಸೌಂದರ್ಯವನ್ನೂ ಇಂಗಿತಗಳನ್ನೂ ನೋಡಿ ವಿಸ್ಮಿತನಾಗಿ, ಈತನ ಗುಣಾತಿಶಯಗಳು ಇವನ ರೂಪ ಯೌವನಗಳಿಗೆ ಅನುರೂಪವಾಗಿರುವುವೆಂದು ತನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಪರಂತಪನನ್ನು ಕುರಿತು "ಅಯ್ಯಾ! ನೀನು ಯಾರು? ನಿನ್ನನ್ನು ನೋಡಿದ ಮಾತ್ರದಿಂದಲೇ, ನನಗೆ ನಿನ್ನಲ್ಲಿ ಅನಿರ್ವಾಚ್ಯವಾದ ಒಂದುಬಗೆಯ ವಿಶ್ವಾಸವೂ, ಸಂತೋಷವೂ ಉಂಟಾಗಿರುವುವು." ಎಂದು ಹೇಳಿದನು.

**ಪರಂತಪ**—ಅಯ್ಯಾ! ನಾನು ಪರದೇಶಿ. ದೇಶಾಟನಾರ್ಥವಾಗಿ ಬರುತಿರುವಾಗ, ಈ ಉದ್ಯಾನದ ರಾಮಣೀಯಕವನ್ನು ನೋಡಿ, ನನ್ನ ಮನಸ್ಸು ನನ್ನನ್ನು ಇಲ್ಲಿಗೆ ಆಕರ್ಷಿಸಿತು. ಆದರೆ, ನಿನ್ನ ವಿಶ್ವಾಸೋಕ್ತಿಗಳಿಗೆ ನಾನು ಬಹಳ ಕೃತಜ್ಞನಾಗಿರುವೆನು. ನನ್ನ ಪೂರ್ವಾಪರಗಳನ್ನು ತಿಳಿದುಕೊಳ್ಳುವುದರಿಂದ, ನಿನಗೆ ಪ್ರಯೋಜನವೇನೂ ತೋರುವುದಿಲ್ಲ.

**ಮಾಧವ**—ಲೋಕದಲ್ಲಿ, ಯಾವ ಕಾರ್ಯವನ್ನಾಗಲಿ, ಅಥವಾ ಯಾವ ಪದಾರ್ಥವನ್ನಾಗಲೀ ನಿಷ್ಪ್ರಯೋಜನವೆಂದು ಹೇಳುವುದಕ್ಕಾಗುವುದಿಲ್ಲ. ನಿನ್ನ ಆಕಾರ ಮಾತ್ರದಿಂದಲೇ, ನಿನ್ನ ಬುದ್ಧಿಯ ಚಾತುರ್ಯಾತಿಶಯವು ಪ್ರಕಟಿಸಲ್ಪಡುತಿರುವುದು. ಆದುದರಿಂದ, ನೀನು ಇಲ್ಲಿಗೆ ವ್ಯಥಾ ಬಂದವನಂತೆ ತೋರುವುದಿಲ್ಲ. ನೀನು ಇಲ್ಲಿಗೆ ಬಂದುದಕ್ಕೆ ಉದ್ದೇಶವೇನು?—ಹೇಳು. ಇದೇ ನಮ್ಮಿಬ್ಬರಿಗೂ ಪ್ರಥಮ ಪರಿಚಯವಾದಾಗ್ಯೂ, ಯಾವುದೋ ಒಂದು ಅನಿರ್ವಚನೀಯವಾದ ಸಂದರ್ಭಸಂಯೋಗದಿಂದ, ನನ್ನ ಮನಸ್ಸು ನಿನ್ನಲ್ಲಿ ಪ್ರೇಮಾತಿಶಯವುಳ್ಳುದಾಗಿರುವುದು. ನಾನು ನಿನ್ನನ್ನು ಹಿಂದೆ ಎಂದೂ ನೋಡಿದಂತೆ ತೋರುವುದಿಲ್ಲ; ಆದರೂ, ಈಗ ನಿನ್ನಲ್ಲಿ ನನಗೆ ಆಕಸ್ಮಿಕವಾಗಿ ಉಂಟಾಗಿರುವ ಪ್ರೇಮಾತಿಶಯವನ್ನು ನೋಡಿದರೆ, ನಮ್ಮಿಬ್ಬರಿಗೂ ಯಾವುದೋ ಒಂದು ಸಂಬಂಧವಿದ್ದರೂ ಇರಬಹುದೆಂಬ ಸಂಶಯವು ನನ್ನ ಮನಸ್ಸಿನಲ್ಲಿ ಅಂಕುರಿಸುತ್ತಿರುವುದು. ಆದುದರಿಂದ, ನನಗೆ ನಿನ್ನಲ್ಲಿ ಉಂಟಾಗುತಿರುವ ವಿಶ್ವಾಸಕ್ಕೆ ಕಾರಣವನ್ನು ತಿಳಿದುಕೊಳ್ಳುವುದಕ್ಕಾಗಿ, ನಾನು ನಿನ್ನ ಪೂರ್ವಾಪರಗಳನ್ನು ಕೇಳುತ್ತೇನೆ.—ಹೇಳು.

**ಪರಂತಪ**—ಹಾಗಾದರೆ, ನನ್ನ ವೃತ್ತಾಂತವನ್ನು ಹೇಳುವುದಕ್ಕೆ ಮೊದಲು ನಿನ್ನ ಪೂರ್ವೋತ್ತರಗಳನ್ನು ತಿಳಿಯಬೇಕೆಂಬ ಅಭಿಲಾಷೆ ನನಗುಂಟಾಗಿರುವುದರಿಂದ, ನೀನು ಮೊದಲು ನಿನ್ನ ವೃತ್ತಾಂತವನ್ನು ಹೇಳು.

**ಮಾಧವ**—ನಾನು ಕಲ್ಯಾಣಪುರ ನಿವಾಸಿ; ನನ್ನ ತಂದೆ ಮಹೇಂದ್ರಪಾಲನೆಂಬವನು. ನನ್ನ ಒಡಹುಟ್ಟಿದವರಲ್ಲಿ ಒಬ್ಬನು ಸತ್ತನು. ಅವನಿಗೆ ಶಂಬರನೆಂಬ ಒಬ್ಬ ಮಗನಿರುವನು. ನನ್ನ ಹಿರಿಯಣ್ಣನು ಸುಮಿತ್ರನು. ನಾನೇ ಕಿರಿಯವನು. ರತ್ನಾಕರವೆಂಬ ದೇಶವು ನನ್ನ ಅಧೀನದಲ್ಲಿರುವುದು.

**ಪರಂತಪ**—(ಆಶ್ಚರ್ಯದೊಡನೆ) ಅಹಹ! ಹಾಗಾದರೆ, ನಿನ್ನ ವಿಶ್ವಾಸಕ್ಕೆ ಸಂಪೂರ್ಣವಾದ ಕಾರಣವುಂಟು. ನಾನು ನಿನ್ನ ಮಿತ್ರನಾದ ವೈರಿಸಿಂಹನ ಮಗನು. ಈಗ ನಿನ್ನಲ್ಲಿ ನನಗೆ ಪಿತೃಭಕ್ತಿ ನೆಲೆಗೊಂಡಿರುವುದು.

**ಮಾಧವ**—(ದುಃಖದಿಂದ ಕಣ್ಣೀರು ಸುರಿಸಿ) ಅಯ್ಯಾ! ಪರಂತಪ! ವೈರಿಸಿಂಹನ ಅಕಾಲಮರಣದಿಂದುಂಟಾದ ಶೋಕಾಗ್ನಿಯು, ನನ್ನನ್ನು ಬಹಳವಾಗಿ ಬಾಧಿಸುತ್ತಿರುವುದು. ಆದರೆ, ನಿನ್ನನ್ನು ನೋಡಿದಕೂಡಲೆ, ನನಗೆ ನಷ್ಟನಾಗಿದ್ದ ಮಿತ್ರನು ಈಗ ಪುನಃ ಲಭಿಸಿದಷ್ಟು ಆನಂದವುಕ್ಕುತಿರುವುದು. ನೀನು ಆತನ ಮಗನೆಂದು ನನಗೆ ತಿಳಿಯದಿದ್ದಕಾರಣ, ನಿನ್ನೊಡನೆ ಈ ರೀತಿಯಾಗಿ ಮಾತನಾಡಿದೆನು. ನನ್ನ ಪ್ರಿಯಮಿತ್ರನಾದ ವೈರಿಸಿಂಹನು, ತನ್ನ ಬುದ್ಧಿಬಲದಿಂದಲೂ, ದೇಹಶಕ್ತಿಯಿಂದಲೂ ಅತ್ಯದ್ಭುತವಾದ ಕಾರ್ಯಗಳನ್ನು ಮಾಡಿರುವನು. ನಿನ್ನನ್ನು ನೋಡಿದರೆ, ನೀನು ಆತನನ್ನು ಮರೆಯಿಸುವಂತೆ ತೋರುವೆ. (ಅವನನ್ನು ಗಾಢಾಲಿಂಗನ ಮಾಡಿಕೊಂಡು, ತನ್ನ ಬಿಡಾರಕ್ಕೆ ಕರೆದುಕೊಂಡು ಹೋಗಿ, ಅವನಿಗೆ ಆತ್ಯಾದರದಿಂದ ಭೋಜನಾದಿಗಳನ್ನು ಮಾಡಿಸಿ ಸತ್ಕರಿಸಿದನು.)

**ಪರಂತಪ**—ನಿನ್ನ ಪ್ರೀತಿಪೂರ್ವಕವಾದ ಆತಿಥ್ಯಕ್ಕೆ ಸಂತುಷ್ಟನಾದೆನು. ಆದರೆ, ನಾನು ಅತ್ಯವಶ್ಯವಾದ ಯಾವುದೋ ಒಂದು ಕಾರ್ಯಾಂತರದಿಂದ ಇಲ್ಲಿಗೆ ಬಂದಿರುವೆನು. ಅದಕ್ಕೆ ಕಾಲಾತಿಕ್ರಮವಾಗುವುದರಿಂದ, ನಿನ್ನ ಅಪ್ಪಣೆಯಾದರೆ ಹೋಗುವೆನು. ಆ ಕಾರ್ಯವನ್ನು ನಿರ್ವಹಿಸಿಕೊಂಡು ಹಿಂದಿರುಗಿ ಬರುವಾಗ, ಪುನಃ ನಿನ್ನ ದರ್ಶನವನ್ನು ತೆಗೆದುಕೊಳ್ಳುವೆನು.

**ಮಾಧವ**—ನಾನು ನಿನಗೆ ಅನ್ಯನೆಂದೆಣಿಸಬೇಡ. ನಿನ್ನ ಕಾರ್ಯವಾವುದು? ಎಂತಹ ರಹಸ್ಯವಾಗಿದ್ದರೂ ನನ್ನೊಡನೆ ಹೇಳಬಹುದು. ಅದರಲ್ಲಿ ನನ್ನಿಂದಾಗತಕ್ಕುದೇನಾದರೂ ಇದ್ದರೆ, ನಿನಗೆ ಸಹಾಯನಾಗಿ ಅದನ್ನು ಮಾಡಿಕೊಡುವುದರಲ್ಲಿ ನಾನು ಸಿದ್ಧನಾಗಿರುವೆನು.

**ಪರಂತಪ**—ಅಯ್ಯಾ! ಮಾಧವ! ಈಗ ನಾನು ಮಾಡಬೇಕಾದ ಕಾರ್ಯವು ಅತಿರಹಸ್ಯವಾದುದು; ಅದನ್ನು ಪ್ರಕಟಿಸುವುದು, ಕಾರ್ಯಹಾನಿಗೆ ಹೇತುವಾಗುವುದೇ ಹೊರತು, ಮತ್ತೆಬೇರೆ ಇಲ್ಲ. ಆದರೂ, ನಿನಗೆ ನನ್ನಲ್ಲಿರುವ ವಿಶ್ವಾಸವನ್ನು ನೋಡಿದರೆ, ನಿನಗೆ ತಿಳಿಯಿಸುವುದರಿಂದ ಯಾವ

ಬಾಧೆಯೂ ಇಲ್ಲವೆಂದು ತೋರುವುದು. ಹೇಳುತ್ತೇನೆ,--ಕೇಳು. ಈ ಪಟ್ಟಣದಲ್ಲಿ, ರಾಜಶಾಸನಗಳನ್ನುಲ್ಲಂಘಿಸಿ ಉಚ್ಛೃಂಖಲಪ್ರವರ್ತನೆಯಿಂದ ಸಜ್ಜನರಿಗೆ ಕಂಟಕಭೂತರಾದವರು ಬಹುಮಂದಿಯಿರುವರೆಂದು, ರಾಜ್ಯಾಧಿಕಾರಿಗಳಿಗೆ ತಿಳಿಯಬಂದಿರುವುದು. ಇವನ ನಿಗ್ರಹಾರ್ಥವಾಗಿ, ಈ ದೇಶಾಧಿಪತಿಯು ನನಗೆ ಸರ್ವಾಧಿಕಾರವನ್ನು ಕೊಟ್ಟು ಇಲ್ಲಿಗೆ ಕಳುಹಿಸಿರುವನು. ಇದಲ್ಲದೆ, ಈ ಪಟ್ಟಣದಲ್ಲಿರುವ ದ್ಯೂತಶಾಲಾಧಿಕಾರಿಯೊಬ್ಬನು, ತನ್ನ ಕಡೆಯುವರಾದ ಕೆಲವು ಜನಗಳೊಡನೆ ಅತಿ ಕ್ರೂರವಾದ ದುಷ್ಕೃತ್ಯಗಳನ್ನು ನಡೆಯಿಸುತ್ತಿರುವುದಾಗಿ ತಿಳಿಯಬಂದಿರುವುದು. ಅವನನ್ನು ಮೊದಲು ನಿಗ್ರಹಿಸಬೇಕಾಗಿರುವುದು.

**ಮಾಧವ**—ಭಾಪ್ಪ! ಭಾಪ್ಪ! ಪ್ರಿಯಮಿತ್ರನೆ! ನಿನ್ನ ಕಾರ್ಯವು ನನ್ನ ಮನಸ್ಸಂಕಲ್ಪಕ್ಕೆ ಅನುಕೂಲವಾಯಿತು. ಈ ಕಾರ್ಯವನ್ನು ನೀನು ನಡೆಯಿಸಿದರೆ, ದುಷ್ಟನಿಗ್ರಹಾರ್ಥವಾಗಿ ನಿನ್ನ ತಂದೆ ಅನುಭವಿಸುತಿದ್ದ ಶ್ರಮ ಸಫಲವಾಗುವುದು. ಅದರೆ, ಆ ದ್ಯೂತಶಾಲಾಧಿಕಾರಿ ಬಹುದುಷ್ಟನು; ಅನೇಕ ಜನಗಳ ಸ್ವತ್ತನ್ನು ಅಪಹರಿಸಿರುವನು; ಇದಕ್ಕಾಗಿ ಅನೇಕ ಪ್ರಾಣಿಹತ್ಯೆಗಳನ್ನೂ ಮಾಡಿರುವನು. ಇವನ ದುಷ್ಕೃತ್ಯಗಳನ್ನು ಉದ್ಘಾಟಿಸುವುದಕ್ಕಾಗಿಯೇ, ನಾನು ಇಲ್ಲಿಗೆ ಬಂದಿರುವೆನು. ಈ ನೀಚನು ನನ್ನ ಧನವಲ್ಲಿಯೂ ಕೂಡ ಅನೇಕ ಭಾಗವನ್ನು ಜೂಜಿನ ನೆಪದಿಂದ ವಂಚಿಸಿ ಗೆದ್ದುಕೊಂಡಿರುವನು. ಆದುದರಿಂದ, ಈ ದಿವಸರಾತ್ರಿ ನಾನು ಹಿಂದೆ ಕಳೆದುಕೊಂಡುದನ್ನೆಲ್ಲ ಗೆದ್ದು ಅವನ ಹೆಮ್ಮೆಯನ್ನು ಮುರಿಯಬೇಕೆಂದು ಶಪಥಮಾಡಿಕೊಂಡಿರುತ್ತೇನೆ.

**ಪರಂತಪ**—ಅಯ್ಯಾ! ಮಾಧವನೇ! ನೀನು ಶಪಥಮಾಡಿರುವಂತೆ ಅವನನ್ನು ಗೆಲ್ಲತಕ್ಕ ಉಪಾಯವೇನಾದರೂ ಉಂಟೋ?

**ಮಾಧವ**—ಈ ದಿವಸರಾತ್ರಿ ಆ ನೀಚನೊಡನೆ ನನ್ನ ಸರ್ವಸ್ವವನ್ನೂ ಪಣಮಾಡಿ ದ್ಯೂತವಾಡುತ್ತೇನೆ. ಬಹುಶಃ ಜಯಲಕ್ಷ್ಮಿಯು ನನಗೆ ಪ್ರಸನ್ನಳಾಗದಿರಲಾರಳೆಂದು ಭಾವಿಸಿದ್ದೇನೆ.

**ಪರಂತಪ**—ಅಯ್ಯಾ! ಮಾಧವ! ನೀನು ಹೀಗೆ ಆಲೋಚಿಸಬೇಡ. ಸರ್ವಥಾ ಅದೃಷ್ಟವನ್ನು ಪರೀಕ್ಷಿಸಬಾರದು. ಲಕ್ಷ್ಮಿಯು ಬಹು ಚಂಚಲೆ.

ಅವಳ ಪ್ರಸನ್ನತೆ ನಂಬತಕ್ಕುದಲ್ಲ. ಈ ದಿವಸವೇನಾದರೂ ಆ ದುಷ್ಟನೇ ಗೆದ್ದಪಕ್ಷದಲ್ಲಿ, ನೀನು ಬಹು ಶೋಚನೀಯವಾದ ಅವಸ್ಥೆಗೆ ಗುರಿಯಾಗುವೆ. ಆದುದರಿಂದ, ನೀನು ಮಾಡಿಕೊಂಡಿರುವ ಶಪಥವನ್ನು ಸರ್ವಥಾ ಬಿಟ್ಟುಬಿಡುವುದೇ ಒಳ್ಳೆಯದು. ಇದಲ್ಲದೆ, ನಾನು ಇವನ ನಿಗ್ರಹಾರ್ಥವಾಗಿಯೇ ಇಲ್ಲಿಗೆ ಬಂದಿರುವೆನಾದುದರಿಂದ, ಈ ಕಾಲದಲ್ಲಿ ನೀನು ಇವನೊಡನೆ ದ್ಯೂತವಾಡಿ ಸರ್ವಸ್ವವನ್ನೂ ಕಳೆದುಕೊಂಡು ನಿರ್ಗತಿಕನಾಗಬೇಡ.

**ಮಾಧವ**—ಈ ದ್ಯೂತದಲ್ಲಿ ಸೋಲುವೆನೆಂಬ ಭಯವು ಲೇಶವಾದರೂ ನನಗಿಲ್ಲ. ನಾನು ಧರ್ಮದ್ಯೂತವಿಶಾರದನೆಂಬ ಬಿರುದನ್ನು ಪಡೆದವನು. ಆದರೆ, ನಾನು ಹಿಂದಿನ ಆಟದಲ್ಲಿ ಸ್ವಲ್ಪ ಔದಾಸೀನ್ಯದಿಂದ ಸೋತೆನೇ ಹೊರತು, ಅಜ್ಞತೆಯಿಂದ ಸೋತವನಲ್ಲ. ಈ ರಾತ್ರಿಯೇನೋ ನಾನು ಗೆಲ್ಲುವುದೇ ದಿಟ. ಅಥವಾ ಒಂದುವೇಳೆ ಸೋತು ನಿರ್ಗತಿಕನಾದರೂ, ಅದೂ ನನಗೆ ಅಭಿಮತವೇ ಸರಿ. ಏಕೆಂದರೆ,—ಇನ್ನು ಮುಂದೆ ಜೀವಿಸಬೇಕೆಂಬ ಕುತೂಹಲವು ನನಗೆ ಸ್ವಲ್ಪವೂ ಇಲ್ಲ. ಈ ಕ್ಷಣವೇ ಆತ್ಮಹತ್ಯೆ ಮಾಡಿಕೊಂಡು ಪ್ರಾಣವನ್ನು ಕಳೆದುಕೊಳ್ಳುವುದರಲ್ಲಿ ಸಿದ್ಧನಾಗಿರುವೆನು. ನನಗೆ ದುಸ್ಸಹವಾದ ಒಂದು ಕ್ಲೇಶವುಂಟಾಗಿದೆ. ಇದು ಯಾವಾಗ ತಪ್ಪುವುದೋ ಎಂದು ಪರಿತಪಿಸುತ್ತಿರುವ ನನಗೆ, ನನ್ನ ಮನಸ್ಸಿನಲ್ಲಿರುವ ಕ್ಲೇಶದ ನಿವಾರಣೆಗೆ ಮರಣವಿನಾ ಇನ್ನಾವ ಉಪಾಯವೂ ತೋರದಿರುವುದರಿಂದ, ಆ ಮರಣವನ್ನೇ ಎದುರು ನೋಡುತ್ತಿರುವೆನು.

**ಪರಂತಪ**—ನಿನ್ನ ಈ ಶಪಥವು ನನಗೆ ಬಹಳ ಸಂಕಟಕರವಾಗಿರುವುದು. ನಿನಗೆ ಪ್ರಾಣದಲ್ಲಿಯೂ ಜುಗುಪ್ಸೆಯುಂಟಾಗುವಷ್ಟು ಕ್ಲೇಶವೇನೋ ಗೊತ್ತಾಗಲಿಲ್ಲ. ಏನು ಹೋದರೂ ಹೋಗಲಿ,-"ಜೀವನ್ ಭದ್ರಾಣಿ ಪಶ್ಯತಿ" ಎಂಬಂತೆ ಪ್ರಾಣರಕ್ಷಣೆಯನ್ನು ಮಾಡಿಕೊಂಡಿದ್ದರೆ, ಕಾಲಾನುಕಾಲದಲ್ಲಿ ಇಹಪರಗಳಲ್ಲಿ ಸಕಲವಾದ ಇಷ್ಟಾರ್ಥಗಳನ್ನೂ ಪಡೆಯಬಹುದೆಂದು ಹಿರಿಯರು ಹೇಳಿರುವರು. ಇದು ನಿನಗೆ ತಿಳಿಯದ ಅಂಶವಲ್ಲ. ನಿನಗೆ ಮರಣವನ್ನು ಎದುರುನೋಡುವಷ್ಟು ದುಃಖಾತಿಶಯವೇನು? ಹೇಳು. ಸಾಧ್ಯವಾದರೆ ಅದಕ್ಕೆ ತಕ್ಕ ಪ್ರತೀಕಾರವನ್ನು ಪರ್ಯಾಲೋಚಿಸೋಣ.

**ಮಾಧವ**—ನನ್ನ ದುಃಖವು ಅತಿದುಸ್ಸಹವಾದುದು ಆದರೂ, ನೀನು ಸ್ವಕೀಯನಾದುದರಿಂದ, ನಿನ್ನೊಡನೆ ಹೇಳುವೆನು,—ಕೇಳು. ನನ್ನ ಹಿರಿಯಣ್ಣನು, ಕಾಮಮೋಹಿನಿಯೆಂಬ ಒಬ್ಬ ಅನಾಥೆಯಾದ ಹುಡುಗಿಯನ್ನು ತಂದು ಸಾಕುತಿರುವನು. ಇವಳು, ತನ್ನ ರೂಪ ಲಾವಣ್ಯ ಸಂಪತ್ತುಗಳಿಂದ ರತಿಯನ್ನೂ ಜರಿಯುವಂತೆ ತೋರುವಳು. ಇವಳ ಬುದ್ಧಿ ಚಾತುರ್ಯವನ್ನು ನೋಡಿದರೆ, ಸರಸ್ವತಿಯೇ ಈ ರೂಪದಿಂದ ಅವತರಿಸಿರುವಳೆಂಬ ಭಾವವು ನೆಲೆಗೊಳ್ಳುವುದು. ಬ್ರಹ್ಮನು ತನ್ನ ಕೌಶಲ್ಯವನ್ನೆಲ್ಲ ವ್ಯಯಮಾಡಿ ಈ ಸ್ತ್ರೀರತ್ನವನ್ನು ಸೃಷ್ಟಿಸಿರುವನೇ ಹೊರತು ಮತ್ತೆ ಬೇರೆಯಿಲ್ಲ. ನಮ್ಮಣ್ಣನು ಪೋಷಣಾರ್ಥವಾಗಿ ಇವಳನ್ನು ತಂದಾರಭ್ಯ, ನನ್ನ ಅನುರಾಗವು ಇವಳಲ್ಲಿಯೇ ನೆಲೆಗೊಂಡಿತು. ದೈವಗತಿಯಿಂದ ಇವಳಿಗೂ ನನ್ನಲ್ಲಿ ಅನುರಾಗವಂಕುರಿಸುತಿದ್ದಿತು. ಆದರೆ, ನಮ್ಮಿಬ್ಬರ ಪರಸ್ಪರಾನುರಾಗವು ಸಫಲವಾಗುವುದಕ್ಕೆ ಮುಂಚೆಯೇ, ನನ್ನ ಕಿರಿಯಣ್ಣನ ಮಗನಾದ ಶಂಬರನು ದುರ್ಬೋಧನಮಾಡಿ, ಇವಳಿಗೆ ನನ್ನಲ್ಲುಂಟಾಗಿದ್ದ ಅನುರಾಗವನ್ನು ನಿರ್ಮೂಲ ಮಾಡಿದನು. ಹಸ್ತಗತಳಾಗಿದ್ದ ಈ ಸ್ತ್ರೀಯು, ನನ್ನಲ್ಲಿ ಪರಾಙ್ಮುಖಿಯಾದಳು. ಇವಳಿಗೆ ನನ್ನಲ್ಲಿ ಅನುರಾಗವು ಕಡಮೆಯಾದಷ್ಟೂ, ನನಗೆ ಐಶ್ವರ್ಯದಲ್ಲಿಯೂ ಪ್ರಾಣದಲ್ಲಿಯೂ ಜುಗುಪ್ಸೆ ಹೆಚ್ಚಾಗುತ ಬಂದಿತು. ಇದಲ್ಲದೆ, ನನಗೆ ಮುಖ್ಯವಾದ ಮತ್ತೊಂದು ಸಂಕಲ್ಪವಿರುವುದು. ಏನೆಂದರೆ:—ಒಂದುವೇಳೆ ನಾನು ಸತ್ತರೂ, ನನ್ನ ಅಪರಿಮಿತವಾದ ಧನವೆಲ್ಲವೂ ನನ್ನ ಮನೋರಥಭಂಗವನ್ನು ಮಾಡಿದ ಆ ನೀಚನಾದ ಶಂಬರನಿಗೆ ಸೇರುವುದು. ನಮ್ಮ ಹಿರಿಯಣ್ಣನಾದ ಸುಮಿತ್ರನಿಗೂ ಬೇಕಾದಷ್ಟು ಧನವಿರುವುದು. ಆದರೆ, ಅವನಿಗೆ ಸಂತಾನವಿಲ್ಲದ ಕಾರಣ, ನನ್ನ ದ್ರವ್ಯದ ಮೇಲೆ ಅವನಿಗೆ ಆಸೆಯಿಲ್ಲ. ಆದುದರಿಂದ, ಈ ನನ್ನ ಐಶ್ವರ್ಯವನ್ನೆಲ್ಲ ತನ್ನ ಸ್ವಾಧೀನಪಡಿಸಿಕೊಳ್ಳಬೇಕೆಂದು, ಶಂಬರನು ಬಹು ಸಾಹಸಮಾಡುತಿರುವನು. ಆದುಕಾರಣ, ನನ್ನ ಆಸ್ತಿಯಲ್ಲಿ ಲೇಶಮಾತ್ರವಾದರೂ, ಆ ದುರಾತ್ಮನಿಗೆ ಸೇರದಂತೆ ಮಾಡುವುದೇ ನನ್ನ ಮುಖ್ಯೋದ್ದೇಶವಾಗಿರುವುದು. ಇದಲ್ಲದೆ, ನನಗೆ ಸೇರಿದ ರತ್ನಾಕರವೆಂಬ ದೇಶದಲ್ಲಿ ಚಿನ್ನದ ಗಣಿಗಳೂ ರತ್ನದ ಗಣಿಗಳೂ ಅನೇಕವಾಗಿದ್ದರೂ, ನನಗೆ ದ್ರವ್ಯಸಂಪಾದನೆ

ಯಲ್ಲಿ ಆಶೆ ತೊಲಗಿದಕಾರಣ, ನಾನು ಅವುಗಳನ್ನು ರಕ್ಷಿಸುವುದಕ್ಕೂ ಪ್ರಯತ್ನಮಾಡಲಿಲ್ಲ. ಆ ಕಾಮಮೋಹಿನಿಗೆ ನನ್ನಲ್ಲಿ ಉಂಟಾದ ಅನುರಾಗವೇ, ನನಗೆ ಈ ಪ್ರಕಾರವಾಗಿ ಪ್ರಾಣದಮೇಲೂ ಐಶ್ವರ್ಯದಮೇಲೂ ಜುಗುಪ್ಸೆಯನ್ನುಂಟುಮಾಡಿರುವುದು. ಹೀಗಿರುವಲ್ಲಿ, ಇನ್ನು ಹೇಗೆತಾನೆ ನಾನು ಬದುಕಿರಲಿ ?—ಹೇಳು.

**ಪರಂತಪ—** ಅಯ್ಯಾ ! ನೀನು ಹೇಳುವುದು ಸರ್ವಥಾ ಯುಕ್ತವಲ್ಲ. ನೀನು ನನಗಿಂತಲೂ ಹಿರಿಯವನು ; ಮತ್ತು ಪಿತೃಪ್ರಾಯನು. ಆದರೂ "ಯುಕ್ತಿಯುಕ್ತಂ ವಚೋ ಗ್ರಾಹ್ಯಂ ಬಾಲಾದಪಿ ಶುಕಾದಪಿ" ಎಂಬ ನೀತಿಯು ನಿನಗೆ ತಿಳಿಯದ ಅಂಶವಲ್ಲವಾದುದರಿಂದ, ನಾನು ಧೈರ್ಯದಿಂದ ನಿನಗೆ ವಿಜ್ಞಾಪಿಸಿಕೊಳ್ಳುತ್ತೇನೆ. ಸ್ತ್ರೀಮಾತ್ರಕ್ಕೋಸ್ಕರ, ಕುಬೇರನ ಐಶ್ವರ್ಯಕ್ಕೆ ಸಮಾನವಾದ ಐಶ್ವರ್ಯವನ್ನೂ, ಇಹಪರಗಳಿಗೆ ಸಾಧಕವಾದ ದೇಹವನ್ನೂ ಕಳೆದುಕೊಳ್ಳುತ್ತೇನೆಂದು ನಿಷ್ಕರ್ಷಿಸಿರುವುದು ಯುಕ್ತವಲ್ಲ. ಸಾಕು, ಬಿಡು. ದ್ರವ್ಯವುಳ್ಳವರಿಗೆ ಯಾವುದುತಾನೆ ಅಸಾಧ್ಯ ? ನೀನು ಮೋಹಿಸಿರುವ ಸ್ತ್ರೀಗೆ ಸಮಾನರಾದ ಸ್ತ್ರೀಯರು ಲೋಕದಲ್ಲಿ ಯಾರೂ ಇಲ್ಲವೆಂದು ನೀನು ಎಣಿಸಿರುವುದು ನಿನ್ನ ಅಜ್ಞಾನದ ಫಲವೇ ಹೊರತು ಮತ್ತೆ ಬೇರೆಯಲ್ಲ. ಈ ಚಿಂತೆಯನ್ನು ಬಿಡು. ಸಾಧ್ಯವಾದರೆ ನನ್ನ ಶಕ್ತಿಯಿಂದ ಆ ಸ್ತ್ರೀಗೆ ಪುನಃ ನಿನ್ನಲ್ಲಿ ಅನುರಾಗವುಂಟಾಗುವಂತೆ ಮಾಡುವೆನು ; ತಪ್ಪಿದರೆ, ಅವಳಿಗಿಂತಲೂ ಉತ್ಕೃಷ್ಟರಾದ ಅನೇಕ ಸ್ತ್ರೀಯರುಗಳನ್ನು ಕರೆತರುವೆನು. ಅವರಲ್ಲಿ ನಿನಗೆ ಇಷ್ಟಳಾದವಳನ್ನು ವರಿಸಿ ಸುಖವಾಗಿ ಬದುಕಬಹುದು. ಇನ್ನು ಈ ವ್ಯಸನವನ್ನು ಬಿಡು.

**ಮಾಧವ—** ಅಯ್ಯಾ ! ಪರಂತಪ ! ನಿನ್ನೊಡನೆ ಸಂಭಾಷಣೆ ಮಾಡಿದ ಹಾಗೆಲ್ಲ ನಿನ್ನಲ್ಲಿ ನನಗೆ ವಿಶ್ವಾಸವು ಹೆಚ್ಚುತಿರುವುದು. ಆದರೆ, ಈ ಪ್ರಪಂಚದಲ್ಲಿ ನನ್ನ ಅನುರಾಗಕ್ಕೆ ಪೂರ್ಣಪಾತ್ರಳಾದವಳು ಆ ಕಾಮಮೋಹಿನಿಯೊಬ್ಬಳೇ. ಅವಳಿಗೆ ನನ್ನಲ್ಲಿ ಅನುರಾಗವುಂಟಾಗುವಂತೆ ಮಾಡಿದರೆ, ಅದಕ್ಕಿಂತ ಹೆಚ್ಚಾದ ಉಪಕಾರವಾವುದೂ ಇಲ್ಲ. ಈ ವುಪಕಾರವನ್ನು ನೀನು ಮಾಡಿದರೆ, ನನ್ನನ್ನೂ ನನ್ನ ಸಂಪತ್ತನ್ನೂ ನಿನಗೆ ಅಧೀನವನ್ನಾಗಿ ಮಾಡುವೆನು. ಅದು ಹಾಗಿರಲಿ; ಸಾಯಂಕಾಲವಾಗುತ ಬಂದಿತು. ಈ ದಿನ

ರಾತ್ರಿ ನಾನು ಆ ನೀಚನಾದ ದುರ್ಬುದ್ಧಿಯೊಡನೆ ದ್ಯೂತವಾಡಬೇಕೆಂದು ಸಂಕಲ್ಪಿಸಿರುವೆನಷ್ಟೆ! ಇದರಲ್ಲಿ ನಾನೇ ಗೆಲ್ಲಬಹುದೆಂಬ ಭರವಸವು ನನಗೆ ಸಂಪೂರ್ಣವಾಗಿರುವುದು. ಆದರೂ, ಜಯಾಪಜಯಗಳು ಪುಣ್ಯಾವಶವಾದುದರಿಂದ, ಅದನ್ನು ನಿರ್ಧರಿಸುವುದಕ್ಕಾಗುವುದಿಲ್ಲ. ಇದಲ್ಲದೆ, ಈ ದುರ್ಬುದ್ಧಿಯು ಬಹಳ ಕೃತ್ರಿಮವಾಗಿ ಆಟವಾಡತಕ್ಕವನು. ಇವನ ಕೃತ್ರಿಮವನ್ನು ಹೊರಪಡಿಸುವುದೂ ಕೂಡ ನನಗೆ ಮುಖ್ಯಕರ್ತವ್ಯವಾಗಿದೆ. ಒಂದುವೇಳೆ ಇವನ ಮೋಸವನ್ನು ಉದ್ಘಾಟಿಸಿದ ಕೂಡಲೆ ನಮ್ಮಿಬ್ಬರಿಗೂ ಕಲಹವುಂಟಾಗಬಹುದು. ಇದರಲ್ಲಿ ಅವನಿಗಾಗಲೀ ನನಗಾಗಲೀ ಅಪಾಯವೂ ಉಂಟಾಗಬಹುದು. ಹಾಗೇನಾದರೂ ಆಗುವ ಸಂದರ್ಭದಲ್ಲಿ, ಆಗ ನಿನ್ನಿಂದ ಆಗತಕ್ಕದೊಂದು ಉಪಕಾರವಿರುವುದು. ಅದನ್ನು ನೀನು ಮಾಡಬೇಕು.

**ಪರಂತಪ**—ನನ್ನಿಂದ ಏನು ಆಗಬೇಕಾದಾಗ್ಯೂ ಅದನ್ನು ನಾನು ಶಿರಸಾವಹಿಸಿ ಮಾಡುವುದರಲ್ಲಿ ಸಿದ್ಧನಾಗಿರುವೆನು: ಹೇಳು.

**ಮಾಧವ**—ಆ ನೀಚನು ತನ್ನನ್ನು ಸೋಲಿಸಿದವರನ್ನು ಕಠಾರಿಯಿಂದ ತಿವಿದು ಕೊಲ್ಲುವುದುಂಟು. ಹಾಗೆ ಅವನೇನಾದರೂ ನನ್ನನ್ನು ಕೊಲ್ಲುವುದಕ್ಕೆ ಯತ್ನಿಸಿ ನನಗೆ ಅಪಾಯ ಸಂಭವಿಸಿದ ಪಕ್ಷದಲ್ಲಿ, ಒಡನೆಯೇ ನನ್ನನ್ನು ಈ ನನ್ನ ವಾಸಗೃಹಕ್ಕೆ ಕರೆದುಕೊಂಡು ಬರಬೇಕು.

**ಪರಂತಪ**—ಅವಶ್ಯವಾಗಿ ಈ ಕೆಲಸ ಮಾಡುತ್ತೇನೆ.

**ಮಾಧವ**—ಬಹುಶಃ ಇವನು ನನ್ನನ್ನು ಕೊಲ್ಲಲಾರನು. ಒಂದುವೇಳೆ ನನಗೆ ಪ್ರಾಣಹಾನಿಯುಂಟಾಗುವ ಸಂದರ್ಭದಲ್ಲಿ, ನೀನು ಮಾಡತಕ್ಕ ಕ್ರಮಗಳನ್ನು ಹೇಳುತ್ತೇನೆ; ಕೇಳು. ನನ್ನ ಕೈಪೆಟ್ಟಿಗೆಯಲ್ಲಿ ನನ್ನ ಆಸ್ತಿಯ ವಿನಿಯೋಗದ ವಿಷಯದಲ್ಲಿ ಒಂದು ಉಯಿಲನ್ನು ಬರೆದು ಇಟ್ಟಿರುತ್ತೇನೆ. ನಾನು ಸತ್ತಪಕ್ಷದಲ್ಲಿ, ನನ್ನ ಶವವನ್ನು ನಮ್ಮ ಅಣ್ಣನ ವಶಮಾಡಬೇಕಲ್ಲದೆ, ಈ ಉಯಿಲೂ ಜಾರಿಗೆ ಬರುವಂತೆ ಮಾಡಬೇಕು. ನನ್ನ ಉತ್ತರಕ್ರಿಯಾದಿಗಳಿಗಾಗಿ ನನ್ನ ಕೈಪೆಟ್ಟಿಗೆಯಲ್ಲಿ ಬೇಕಾದಷ್ಟು ದ್ರವ್ಯವನ್ನು ಇಟ್ಟಿರುತ್ತೇನೆ.

**ಪರಂತಪ**—ಅಯ್ಯಾ! ನಿನ್ನ ಆಜ್ಞೆಗನುಸಾರವಾಗಿ ನಡೆಯುವುದರಲ್ಲಿ ಯಾವ ಸಂಶಯವೂ ಇಲ್ಲ. ಈ ವಿಷಯದಲ್ಲಿ ನಾನು ನಿನ್ನ ಆಜ್ಞೆಯನ್ನು ಕೃತಜ್ಞನಾಗಿ ನೆರವೇರಿಸುವೆನು. ಆದರೆ, ನೀನು ಹೇಳುವುದು ಅತಿ ಪ್ರಮಾದಕರವಾಗಿರುವುದರಿಂದ, ನೀನು ಹೀಗೆ ದುಡುಕುವುದು ಸರ್ವಥಾ ಯುಕ್ತವಲ್ಲ. ಈ ರಾತ್ರಿಯ ಜೂಜಿನ ವಿಷಯದಲ್ಲಿ ನೀನು ಮಾಡಿರುವ ಸಂಕಲ್ಪವನ್ನು ಬಿಡು ದ್ಯೂತದಿಂದ ನಳ ಯುಧಿಷ್ಠಿರಾದಿಗಳೂ ಕೂಡ ಬಹಳ ಕಷ್ಟವನ್ನು ಅನುಭವಿಸಿದ ಸಂಗತಿಯೂ, ಇನ್ನೂ ಅನೇಕರು ದುರ್ನಿವಾರವಾದ ಅತಿ ಸಂಕಟಗಳಿಗೆ ಭಾಗಿಗಳಾದರೆಂಬುದೂ, ನಿನಗೆ ತಿಳಿಯದ ಅಂಶವಲ್ಲ. ಈಗ ನಷ್ಟವಾದ ದ್ರವ್ಯವು ಹೋದರೂಹೋಗಲಿ; ಅದನ್ನು ಬೇರೆಯಾದ ಮಾರ್ಗಗಳಿಂದ ಸಂಪಾದಿಸಬಹುದು; ನೀನು ಖಂಡಿತವಾಗಿ ಈ ರಾತ್ರಿ ಅವನೊಡನೆ ಜೂಜಾಡಬೇಡ.

**ಮಾಧವ**—ನನ್ನ ಸಂಕಲ್ಪವು ದುರ್ನಿವಾರವಾದುದು. ಒಂದುವೇಳೆ ಸೂರ್ಯನಾದರೂ ತನ್ನ ಗತಿಯನ್ನು ಬದಲಾಯಿಸಬಹುದೇ ಹೊರತು, ನಾನೆಂದಿಗೂ ನನ್ನ ಸಂಕಲ್ಪವನ್ನು ವ್ಯತ್ಯಸ್ತವನ್ನಾಗಿ ಮಾಡುವನಲ್ಲ. ಪ್ರಿಯಮಿತ್ರನೇ! ಕೇಳು:—ನಾನು ದ್ರವ್ಯಾರ್ಜನೆಗೋಸ್ಕರ ಖಂಡಿತವಾಗಿ ಜೂಜಾಡತಕ್ಕವನಲ್ಲ. ಅನೇಕ ಜನಗಳನ್ನು ಮೋಸಪಡಿಸಿ ಕೆಡಿಸಿರುವ ಆ ದುರಾತ್ಮನಾದ ದುರ್ಬುದ್ಧಿಯ ಕೃತ್ರಿಮವನ್ನು ಉದ್ಘಾಟಿಸುವುದೇ, ನನ್ನ ಮುಖ್ಯ ಸಂಕಲ್ಪವು. ಅವನ ಕೃತ್ರಿಮವನ್ನು ಬಹಿರಂಗಪಡಿಸಿ ಅವನಿಗೆ ತಕ್ಕ ಶಿಕ್ಷೆಯನ್ನು ಮಾಡಿಸಿದರೆ, ಈ ನಮ್ಮ ದೇಶವನ್ನು ನಿರ್ಮೂಲಮಾಡುವ ಒಂದು ಒಗೆಯ ಸಾಂಕ್ರಾಮಿಕ ರೋಗವನ್ನು ಅಡಗಿಸಿದಂತಾಗುವುದು. ಆದುದರಿಂದ, ಈ ದಿವಸರಾತ್ರಿ ನಾನು ಇವನ ಕಾಪಟ್ಯವನ್ನು ಹೊರಪಡಿಸಿ ಇವನನ್ನು ಯಮಾಲಯಕ್ಕೆ ಕಳುಹಿಸುವ ಪ್ರಯತ್ನವನ್ನೇ ಮಾಡುವೆನು. ಅಥವಾ, ಈ ಕಾರ್ಯಕ್ಕಾಗಿ ನನ್ನ ಪ್ರಾಣವನ್ನಾದರೂ ಒಪ್ಪಿಸುವೆನು. ಇದೂ ನನಗೆ ಅಭಿಮತವೇ ಸರಿ. ಈ ಪ್ರತಿಜ್ಞೆಯ ವಿಷಯದಲ್ಲಿ, ಆ ಕಾಮಮೋಹಿನಿಯೇ ಬಂದು ನನ್ನನ್ನು ತಾನಾಗಿ ವರಿಸುವುದಾಗಿ ಹೇಳಿ ಅಡ್ಡಿಮಾಡಿದರೂ, ನನ್ನ ಪ್ರತಿಜ್ಞಾಪರಿಪಾಲನಾರ್ಥವಾಗಿ ಅವಳ ಪ್ರಾರ್ಥನೆಯನ್ನೂ ನಿರಾಕರಿಸುವೆನು. ನೀನು ನನ್ನ ಈ ಸಂಕಲ್ಪಕ್ಕೆ ಅಡ್ಡಿಯಾಗಬೇಡ. ಲೋಕ

ಕಂಟಕನಾದ ಆ ದುರಾತ್ಮನನ್ನು ನಿಗ್ರಹಿಸಬೇಕೆಂಬ ನನ್ನ ಪ್ರಯತ್ನವು ಸಫಲವಾದರೂ ಆಗಲಿ ; ಅಥವಾ, ಇವನನ್ನು ನಿಗ್ರಹಿಸುವುದರಲ್ಲಿ ನನಗೆ ಪ್ರಾಣಹಾನಿಯುಂಟಾದರೂ ಆಗಲಿ. ಇವೆರಡೂ ನನಗೆ ಕೀರ್ತಿಕರವಾಗಿಯೇ ಇರುವುವು. ಈ ವಿಷಯದಲ್ಲಿ ನೀನು ಸ್ವಲ್ಪವೂ ವ್ಯಸನಪಡಬೇಡ. "ಜಾತಸ್ಯ ಮರಣಂ ಧ್ರುವಂ" ಎಂಬಂತೆ. ಹುಟ್ಟಿದವರಿಗೆ ಮರಣವು ಸಿದ್ಧವಾಗಿರುವುದು. ಇಂಥ ಕಾರ್ಯಕ್ಕೋಸ್ಕರ ಪ್ರಾಣವನ್ನು ಕೊಡುವವನೇ ಧನ್ಯನೆನ್ನಿಸಿಕೊಳ್ಳುವನಲ್ಲವೆ !

**ಪರಂತಪ**—ಅಯ್ಯಾ ! ಪೂಜ್ಯನಾದ ಮಾಧವನೆ ! ಈಗಲೀಗ ನಿನ್ನ ಸಂಕಲ್ಪವು ಅತ್ಯುತ್ತಮವೆಂಬ ಭಾವವು ನನ್ನಲ್ಲಿ ನೆಲೆಗೊಂಡಿತು. ಇತರರ ಕ್ಷೇಮಕ್ಕೋಸ್ಕರ ಪ್ರಾಣಾಸಕ್ತನಾಗಿರುವ ಈ ನಿನ್ನ ಲೋಕವಿಲಕ್ಷಣವಾದ ಅಭಿಪ್ರಾಯವು ನನಗೆ ತಿಳಿಯದಿದ್ದ ಕಾರಣ, ಆ ಕಾರ್ಯದಲ್ಲಿ ನಿನ್ನನ್ನು ನಾನು ನಿರೋಧಿಸಿದೆನು. ಲೋಕದಲ್ಲಿ ಪ್ರತಿದಿನವೂ ಎಷ್ಟೋ ಜನರು ಸಾಯುವರು. ಆದರೆ, ಲೋಕಕಂಟಕ ನಿವಾರಣೆಗೋಸ್ಕರ ತನ್ನ ಪ್ರಾಣವನ್ನಾದರೂ ಒಪ್ಪಿಸುವುದರಲ್ಲಿ ಸಿದ್ಧನಾಗಿರುವ ನಿನ್ನಂಥ ದೃಢಸಂಕಲ್ಪರನ್ನು ನಾನು ನೋಡಿರಲಿಲ್ಲ. ನೀನು ಹೋಗು. ಆ ದುರಾತ್ಮನನ್ನು ನಿಗ್ರಹಿಸುವುದಕ್ಕೆ ಪ್ರಯತ್ನಿಸು. ನಾನು ನಿನಗೆ ಬೆಂಬಲವಾಗಿ ಬರುವೆನು.

**ಮಾಧವ**—ಈಗ ನಿನ್ನಿಂದ ಹೇಳಲ್ಪಟ್ಟ ಮಾತುಗಳೇ ನಿನ್ನ ಧರ್ಮಾಸಕ್ತತೆಯನ್ನು ಪ್ರಕಟಿಸುವುವು. ಅದು ಹಾಗಿರಲಿ ; ಇದೋ ಈ ವಜ್ರದ ಉಂಗುರವನ್ನು ತೆಗೆದುಕೊ. ಇದು ನಮಗೆ ವಂಶಪರಂಪರೆಯಾಗಿ ಬಂದಿರತಕ್ಕ ಅಭಿಜ್ಞಾನವಸ್ತು. ನಾನು ಒಂದುವೇಳೆ ಈ ದಿನ ರಾತ್ರಿ ಆ ದುರಾತ್ಮನಿಂದ ಸಂಹೃತನಾದ ಪಕ್ಷದಲ್ಲಿ, ಈ ಉಂಗುರವನ್ನು ನನ್ನ ಅಣ್ಣನಿಗೆ ತೋರಿಸು. ಆಗ ಅವನಿಗೆ ನಿನ್ನಲ್ಲಿ ಭ್ರಾತೃವಾತ್ಸಲ್ಯವುಂಟಾಗುವುದರಲ್ಲಿ ಸಂಶಯವಿಲ್ಲ; ಇದಲ್ಲದೆ, ನಿನಗೆ ಬೇಕಾದ ಇಷ್ಟಾರ್ಥಗಳನ್ನೆಲ್ಲ ಅವನಿಂದ ಪಡೆಯಬಹುದು. ಹೀಗಲ್ಲದೆ, ಈ ವುಂಗುರುವೇನಾದರೂ ನನ್ನಲ್ಲಿ ಜ್ಞಾತಿಮಾತ್ಸರ್ಯವನ್ನಿಟ್ಟಿರುವ ನನ್ನ ಅಣ್ಣನ ಮಗನಾದ ಶಂಬರನಿಗೆ ಸಿಕ್ಕಿದ ಪಕ್ಷದಲ್ಲಿ, ಆಗ ನೀನು ಮೃತ್ಯುವಶನಾಗುವೆ. ಆದುದರಿಂದ, ಈ ವಿಷಯದಲ್ಲಿ ನೀನು ಬಹು ಜಾಗರೂಕನಾಗಿರತಕ್ಕದು. ಈ ರಾತ್ರಿ ದ್ಯೂತಗೃಹಕ್ಕೆ ಬಾ;

ಆದರೆ, ಈ ನಮ್ಮಗಳ ಆಟದ ವಿಷಯದಲ್ಲಾಗಲಿ-ನನ್ನ ಪ್ರಾಣರಕ್ಷಣೆಯ ವಿಷಯದಲ್ಲಾಗಲಿ-ನೀನು ಸ್ವಲ್ಪವೂ ಪ್ರವರ್ತಿಸಬೇಡ. ನಾನು ನಿನಗೆ ಹೇಳಿರುವ ಕಾರ್ಯಗಳನ್ನು ಮಾತ್ರ ಜಾಗ್ರತೆಯಿಂದ ನಡೆಯಿಸು. ಎಂದು ಹೇಳಿ, ಮಾಧವನು ದ್ಯೂತಗೃಹಕ್ಕೆ ಹೊರಟುಹೋದನು.

## ಅಧ್ಯಾಯ. ೨.

ಮಾಧವನು ಹೊರಟು ಹೋದಮೇಲೆ, ಪರಂತಪನ ಮನಸ್ಸಿನಲ್ಲಿ ಹೀಗೆ ಚಿತ್ರವಿಚಿತ್ರಗಳಾದ ಆಲೋಚನೆಗಳು ಅಂಕುರಿಸಿದವು:-

ಮಾಧವನು ಹುಚ್ಚನೆ? ಎಂದಿಗೂ ಹುಚ್ಚನಂತೆ ತೋರುವುದಿಲ್ಲ. ಅಥವಾ, ದ್ಯೂತವೆಂಬುದು, ಅದರಲ್ಲಿ ಆಸಕ್ತರಾದವರಿಗೆ ಮಿತಿಮೀರಿದ ಒಂದು ವಿಧವಾದ ಹುಚ್ಚನ್ನು ಹಿಡಿಸುವುದುಂಟು. ಇಂಥ ಉನ್ಮಾದವೇನಾದರೂ ಇವನಲ್ಲಿ ಉದ್ಭವಿಸಿರಬಹುದೆ? ಅದನ್ನೂ ಹೇಳುವುದಕ್ಕಾಗುವುದಿಲ್ಲ. ಏಕೆಂದರೆ.—ಇವನ ಐಶ್ವರ್ಯವು ಅಪರಿಮಿತವಾಗಿರುವುದರಿಂದ, ನೀಚಕೃತ್ಯದಿಂದ ಧನಾರ್ಜನೆಯನ್ನು ಮಾಡಬೇಕೆಂಬ ಅಭಿಲಾಷೆಯು ಇವನಲ್ಲುಂಟಾಗಿರಲಾರದು. ಇದಲ್ಲದೆ, ಇವನು ದ್ಯೂತಾಸಕ್ತನಾಗಿದ್ದಾಗ್ಗೂ, ಕಪಟದ್ಯೂತವನ್ನಾಡಿ ಜನಗಳನ್ನು ಕೆಡಿಸತಕ್ಕವರಲ್ಲಿ ಇವನ ದ್ವೇಷವು ಅನ್ಯಾದೃಶವಾಗಿರುವುದನ್ನು ನೋಡಿದರೆ ಪರಮಾಶ್ಚರ್ಯವಾಗುವುದು. ಇವನಿಗೆ ಧರ್ಮದ್ಯೂತವಿಶಾರದನೆಂಬ ಬಿರುದು ಒಪ್ಪುವುದು. ಇವನು ಅಧರ್ಮದ್ಯೂತಾಸಕ್ತರನ್ನು ನಿಗ್ರಹಿಸುವುದಕ್ಕೋಸ್ಕರ ತನ್ನ ಸರ್ವಸ್ವವನ್ನೂ- ಕೊನೆಗೆ ಪ್ರಾಣವನ್ನೂ- ಕಳೆದುಕೊಳ್ಳುವುದರಲ್ಲಿ ಸಿದ್ಧನಾಗಿರುವನು.

ಆಹಾ! ಇವನು ಲೋಕವಿಲಕ್ಷಣನಾದ ಮನುಷ್ಯನು. ಇವನ ಮಾತುಗಳಿಂದ, ದುರಾತ್ಮನಾದ ದುರ್ಬುದ್ಧಿಯು ಕಪಟದ್ಯೂತಾಸಕ್ತನೆಂಬುವಲ್ಲದೆ- ಘಾತುಕನಾಗಿಯೂ ಇರುವನೆಂದು ತಿಳಿಯಬರುವುದು. ಇದಲ್ಲದೆ. ಮಾಧವನು ಈ ರಾತ್ರಿಯ ದ್ಯೂತದಲ್ಲಿ ತನಗೇನಾದರೂ ಅಪಾಯ ಸಂಭವಿಸಬಹುದೆಂದು ಹೇಳಿರುವನು. ಆದುದರಿಂದ, ಸರ್ವಪ್ರಯತ್ನದಿಂದಲೂ ಮಾಧವನಿಗೆ ಆ ವಿಪತ್ತನ್ನು ತಪ್ಪಿಸಬೇಕಲ್ಲದೆ, ಘಾತುಕನಾದ ಆ ದುರ್ಬುದ್ಧಿಯ ಸೊಕ್ಕನ್ನಡಗಿಸಿ ಅವನನ್ನು ಯಮಾಲಯಕ್ಕೆ ಕಳುಹಿಸಬೇಕಾಗಿರುವುದು. ಒಳ್ಳೆಯದಿರಲಿ; ಇದಕ್ಕೆ ತಕ್ಕ ಕೃಷಿಯನ್ನು ಮಾಡುವೆನು.

ಹೀಗೆ ತನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಸಮೀಪದಲ್ಲಿದ್ದ ಭೋಜನಶಾಲೆಯಲ್ಲಿ ಭೋಜನವನ್ನು ತೀರಿಸಿಕೊಂಡು, ಪರಂತಪನು ದ್ಯೂತಗೃಹಕ್ಕೆ ಪ್ರವೇಶಿಸಿದನು. ಅಲ್ಲಿ ದುರ್ಬುದ್ಧಿಯೊಡನೆ ಮಾಧವನು ದ್ಯೂತವಾಡುವುದಕ್ಕೆ ಸಿದ್ಧನಾಗಿದ್ದನು. ದುರ್ಬುದ್ಧಿಯ ಕಡೆಯ ಕೆಲವು ಜನಗಳೂ, ಉದಾಸೀನರಾದ ಕೆಲವು ಜನಗಳೂ ಸೇರಿ ಇದ್ದರು. ಕೂಡಲೆ ಆಟಕ್ಕೆ ಉಪಕ್ರಮವಾಯಿತು. ಇತ್ತಲಾಗಿ. ಪರಂತಪನು ಬಾರುಮಾಡಲ್ಪಟ್ಟ ರಿವಾಲ್ವರನ್ನು ಸಿದ್ಧಪಡಿಸಿಕೊಂಡು. ದ್ಯೂತವಾಡುತ್ತಿರುವ ಇವರಿಬ್ಬರ ಸಂಭಾಷಣೆಯನ್ನು ಕೇಳುತ್ತ ಸ್ವಲ್ಪದೂರದಲ್ಲಿ ಕುಳಿತಿದ್ದನು. ಮಾಧವನಾದರೋ, ಈಗಿನ ದ್ಯೂತದಲ್ಲಿ ದುರ್ಬುದ್ಧಿಯ ಮೋಸಕ್ಕೆ ಸ್ವಲ್ಪವೂ ಅವಕಾಶಕೊಡದೆ, ಪ್ರತಿಯೊಂದು ಆಟವನ್ನೂ ಅಲ್ಲಿದ್ದ ಸಮಸ್ತ ಜನರಿಗೂ ಸಮ್ಮತವಾಗಿರುವಂತೆ ಆಡುತಿದ್ದನು. ಇವನ ಕೌಶಲ್ಯದಿಂದಲೋ. ಅಥವಾ ದೈವಗತಿಯಿಂದದಲೋ. ಜಯಲಕ್ಷ್ಮಿಯು ಇವನನ್ನೇ ವರಿಸಿದಳು. ಅನೇಕ ಜನಗಳಿಗೆ ಮೋಸಪಡಿಸಿ ಅಧರ್ಮದಿಂದ ಗೆದ್ದಿದ್ದ ಆ ದುರ್ಬುದ್ಧಿಯ ದ್ರವ್ಯದಲ್ಲಿ ಅರ್ಧಭಾಗವನ್ನು ಮಾಧವನು ಗೆದ್ದನು. ಒಡನೆಯೇ ದುರ್ಬುದ್ಧಿಗೆ ಸಂತಾಪವೂ ಮಾಧವನ ಮೇಲೆ ಕ್ರೋಧವೂ ಹೆಚ್ಚುತಬಂದುವು.

**ದುರ್ಬುದ್ಧಿ**—(ಮಾಧವನನ್ನು ಕುರಿತು) ಅಯ್ಯಾ! ಮಾಧವನೆ! ಈ ದಿನ ಜಯಲಕ್ಷ್ಮಿಯು ನಿನ್ನ ಅಧೀನಳಾಗಿರುವಳು. ಆದರೂ ಚಿಂತೆಯಿಲ್ಲ. ಈಗ ನನ್ನ ಆಸ್ತಿಯಲ್ಲಿ ಅರ್ಧಭಾಗವು ನಿನಗೆ ಸೇರಿಹೋಯಿತು. ಇನ್ನು ಮುಂದೆ ಆಡಬೇಕಾದರೆ, ಸೋತವರು ಗೆದ್ದವರಿಗೆ ತಮ್ಮ ಸರ್ವಸ್ವ

ವನ್ನೂ ಒಪ್ಪಿಸಿಬಿಡಬೇಕು. ಈ ನಿರ್ಣಯಕ್ಕೆ ಒಪ್ಪುವುದಾದರೆ, ಮುಂದಕ್ಕೆ ಆಡೋಣ! ಇಲ್ಲವಾದರೆ ಈ ನಮ್ಮ ದ್ಯೂತವು ಇಷ್ಟಕ್ಕೇ ಸಮಾಪ್ತವಾಗಲಿ.

**ಮಾಧವ**—(ಸ್ವಲ್ಪಯೋಚಿಸಿ) ಅಯ್ಯಾ! ದುರ್ಬುದ್ಧಿಯೆ! ನೀನು ಹೇಳುವುದು ನನಗೆ ಒಪ್ಪಿತು. ಮುಖ್ಯವಾಗಿ ಈ ದ್ಯೂತವೆಂಬುದೇ ಕೆಟ್ಟದ್ದು. ಆದರೂ, ಈ ಕೆಲಸದಲ್ಲಿ ಪ್ರವರ್ತಿಸಿದವರು ಅದರಿಂದಲೇ ಪೂರ್ಣವಾಗಿ ಕೆಡಬೇಕು; ಅಥವಾ ಸಂಪೂರ್ಣವಾಗಿ ಅದರಿಂದಲೇ ಬದುಕಬೇಕು. ಈಗ ನನ್ನ ಧನವು ನಿನ್ನ ಧನಕ್ಕಿಂತಲೂ ಶತಾಂಶ ಅಧಿಕವಾಗಿರುವುದು. ಆದಾಗ್ಯೂ ಚಿಂತೆಯಿಲ್ಲ. ನೀನು ಗೆದ್ದಪಕ್ಷದಲ್ಲಿ, ಈಗ ನಿನ್ನಿಂದ ನಾನು ಗೆದ್ದಿರುವ ದ್ರವ್ಯದೊಡನೆ ನನ್ನ ಸರ್ವಸ್ವವನ್ನೂ ನಿನಗೆ ಒಪ್ಪಿಸಿ, ನಾನು ದೇಶಭ್ರಷ್ಟನಾಗಿ ಹೋಗುತ್ತೇನೆ. ಅಥವಾ ನಾನು ಗೆದ್ದಪಕ್ಷದಲ್ಲಿ, ಉಳಿದ ನಿನ್ನ ಆಸ್ತಿಯೆಲ್ಲವೂ ನನಗೆ ಸೇರಲಿ.

ಇದಕ್ಕೆ ಇಬ್ಬರೂ ಒಪ್ಪಿದರು. ಅದೇ ಅರ್ಥವನ್ನು ಕುರಿತು, ಅಲ್ಲಿದ್ದ ಸಭಿಕರ ಅನುಮತಿಯಿಂದ ಒಂದು ನಿರ್ಣಯ ಪತ್ರಿಕೆಯು ಬರೆಯಲ್ಪಟ್ಟಿತು. ಅದಕ್ಕೆ ಅಲ್ಲಿದ್ದ ಸಮಸ್ತ ಜನರೂ ಸ್ವಹಸ್ತ ಚಿಹ್ನೆಗಳನ್ನು ಹಾಕಿದರು. ಒಡನೆಯೇ ಆಟಕ್ಕೆ ಉಪಕ್ರಮವಾಯಿತು. ಆಗಲೂ ದೈವಗತಿಯಿಂದ ಮಾಧವನಿಗೇ ಜಯವಾಯಿತು. ಕೂಡಲೇ ದುರ್ಬುದ್ಧಿಯು ಅನಿರ್ವಚನೀಯವಾದ ಸಂತಾಪಕ್ಕೆ ಪರವಶನಾಗಿ, ಕೆಲವು ನಿಮಿಷಗಳವರೆಗೂ ಸ್ತಬ್ಧನಾಗಿದ್ದು, ಸ್ವಲ್ಪ ಹೊತ್ತಿನಮೇಲೆ ಚೇತರಿಸಿಕೊಂಡು, ಮಾಧವನನ್ನು ಕುರಿತು "ಎಲಾ ದುರಾತ್ಮನಾದ ಮಾಧವನೆ! ನೀನು ಬಹಳ ವಂಚಕನು. ನಾನಾದರೋ, ಅನೇಕಲಕ್ಷ ಜನಗಳೊಡನೆ ದ್ಯೂತವಾಡಿದವನು; ಆದರೂ ಇದುವರೆಗೂ ಯಾರಿಗೂ ಸೋತವನಲ್ಲ. ಆದರೆ, ನೀನು ಯಾವದೋ ಒಂದು ವಿಧವಾದ ಚಮತ್ಕಾರದಿಂದ ನನ್ನನ್ನು ವಂಚಿಸಿ ಅಧರ್ಮದ್ಯೂತದಿಂದ ಈ ರೀತಿಯಾಗಿ ನನ್ನನ್ನು ಗೆದ್ದಿರುವಂತೆ ನನಗೆ ಸಂಶಯವುಂಟಾಗಿರುವುದು. ಆದುದರಿಂದ, ಈ ಆಟವು ನನಗೆ ಸರ್ವಥಾ ಸಮರ್ಪಕವಲ್ಲ. ನೀನು ಗೆದ್ದಿರುವುದರಲ್ಲಿ ಯಾವುದನ್ನೂ ನಿನಗೆ ನಾನು ಕೊಡತಕ್ಕವನಲ್ಲ." ಎಂದನು.

**ಮಾಧವ**—ಎಲಾ ನೀಚನೆ! ನಿನ್ನ ಹೆಸರಿಗೆ ಅನುರೂಪವಾದ ಮಾತುಗಳನ್ನಾಡಿದೆ. ನಾನು ವಂಚಕನೆಂಬುದನ್ನೂ, ಅಧರ್ಮದಿಂದ ಆಡತಕ್ಕವ

ನೆಂಬುದನ್ನೂ ನಿರ್ಣಯಿಸುವುದಕ್ಕೆ, ಈ ಸಭಿಕರೇ ಸಾಕ್ಷಿಭೂತರಾಗಿರುವರಲ್ಲವೆ! ನೀನು ಈಗ ಬರೆದಿರುವ ನಿರ್ಣಯಪತ್ರಿಕೆಯೇ ಪ್ರಬಲವಾದ ಸಾಕ್ಷಿಯಾಗಿರುವುದು. ನಮ್ಮಿಬ್ಬರಲ್ಲಿ ಯಾರು ವಂಚಕರೆಂಬುದನ್ನು ಈ ಸಭಿಕರೇ ನಿರ್ಣಯಿಸಲಿ. ಅಧರ್ಮದ್ಯೂತದಿಂದ ಅನೇಕ ಜನರನ್ನು ವಂಚಿಸಿ ಗಳಿಸಿಟ್ಟಿರುವ ನಿನ್ನ ದ್ರವ್ಯವು, ಎಷ್ಟು ದಿವಸ ನಿನಗೆ ಸಹಕಾರಿಯಾಗಿರುವುದು? "ಅತ್ಯುತ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೇ" ಎಂಬ ನ್ಯಾಯಕ್ಕನುಸಾರವಾಗಿ, ನೀನು ಮಾಡಿರುವ ಅತಿ ಕ್ರೂರವಾದ ಪಾಪಕೃತ್ಯಗಳಿಗೆ ಈಗಲೇ ತಕ್ಕ ಫಲವನ್ನನುಭವಿಸಬೇಕಾಗಿದೆ. ಆದುದರಿಂದ, ಇನ್ನು ಮೇಲೆ ಇಂಥ ಕಪಟಕೃತ್ಯಗಳನ್ನು ಬಿಡು. ಇಂಥ ಲೋಕಾಪವಾದದಲ್ಲಿ ಜೀವಿಸುವುದಕ್ಕಿಂತ ಮರಣವೇ ಉತ್ಕೃಷ್ಟವೆಂದು ಹಿರಿಯರು ಹೇಳುವರು. ಆದುದರಿಂದ, ಪೂರ್ವಾಪರಗಳನ್ನು ಯೋಚಿಸಿ ವಿವೇಕದಿಂದಿರು.

ಈ ಮಾತನ್ನು ಕೇಳಿದೊಡನೆಯೇ ದುರ್ಬುದ್ಧಿಯು ಅತ್ಯಂತ ಕ್ರೋಧಪರವಶನಾಗಿ, ತಾನು ಬಚ್ಚಿಟ್ಟುಕೊಂಡಿದ್ದ ಕಠಾರಿಯನ್ನು ತೆಗೆದು "ಎಲಾ! ನೀಚನಾದ ಮಾಧವನೆ! ಸಾಕು. ನಿನ್ನ ನೀತಿಬೋಧನೆಯನ್ನು ಇಷ್ಟಕ್ಕೆ ನಿಲ್ಲಿಸು. ನಿನ್ನ ಆಯುಸ್ಸು ಇಂದಿಗೆ ಮುಗಿಯಿತು." ಎಂದು ಅವನಮೇಲೆ ಅದನ್ನು ಪ್ರಯೋಗಿಸಿದನು. ಒಡನೆಯೇ ಮಾಧವನು ಮೂರ್ಛಿತನಾಗಿ ಕೆಳಕ್ಕೆ ಬಿದ್ದನು. ಇವನು ಬೀಳುವುದರೊಳಗಾಗಿಯೇ ದೊಡ್ಡ ಶಬ್ದವೊಂದು ಕೇಳಿಸಿತು. ಅಲ್ಲಿ ಸೇರಿದ್ದ ಜನರೆಲ್ಲರೂ ಗಾಬರಿಯಿಂದ ಅತ್ತಿತ್ತ ನೋಡುತ್ತಿರುವಷ್ಟರಲ್ಲಿ, ಆ ದುರ್ಬುದ್ಧಿಯು ಭಿನ್ನಗಾತ್ರನಾಗಿ ಕೆಳಗೆ ಬಿದ್ದಿದ್ದನು. ಅಷ್ಟರಲ್ಲಿಯೇ ಅಲ್ಲಿ ಕೋಲಾಹಲವು ಪ್ರಬಲವಾಯಿತು. ಬಹು ಜನಗಳು ಬಂದು ಸೇರಿದರು. ದುರ್ಬುದ್ಧಿಗೆ ಇಂಥ ಅಪಾಯವು ಯಾರಿಂದ ಸಂಭವಿಸಿತೆಂದು ಎಲ್ಲಲ್ಲಿ ನೋಡಿದರೂ ಗೊತ್ತಾಗದಿರಲು, ಚಿಂತಾಕ್ರಾಂತರಾಗಿ ಅವನ ಕಡೆಯುವರು ಅವನನ್ನು ಎತ್ತಿಕೊಂಡು ಹೊರಟು ಹೋದರು.

# ಅಧ್ಯಾಯ. ೩.

ಅಲ್ಲಿದ್ದ ಇತರ ಜನಗಳೆಲ್ಲರೂ ಮಾಧವನಿಗೆ ಸಂಭವಿಸಿದ ಈ ಅಪಾಯವನ್ನು ಕುರಿತು ದುಃಖಿಸುತ್ತಿರುವಷ್ಟರಲ್ಲಿಯೇ, ಪರಂತಪನು ಮಾಧವನ ಬಳಿಗೆ ಬಂದು ಶೈತ್ಯೋಪಚಾರಗಳನ್ನು ಮಾಡಲು, ಮಾಧವನಿಗೆ ಸ್ವಲ್ಪ ಪ್ರಜ್ಞೆಯುಂಟಾಯಿತು. ಆಗ ಪರಂತಪನು ಇವನಿಗೆ ಬಿದ್ದಿರುವ ಪ್ರಹಾರವನ್ನು ಪರೀಕ್ಷಿಸುತ್ತ, ಸ್ವಲ್ಪ ವಿವರ್ಣವದನನಾಗಿ ಚಿಂತಿಸುತಿದ್ದನು.

**ಮಾಧವ**—ಅಯ್ಯಾ! ಪರಂತಪನೆ! ಸಂತಾಪಪಡಬೇಡ. ನನಗೆ ಈ ಅವಸ್ಥೆ ಬರಬಹುದೆಂದು ನಾನು ಮೊದಲೇ ತಿಳಿಯಿಸಿದ್ದೆನಲ್ಲವೆ! ನಾನು ಯೋಚಿಸಿದಂತೆಯೇ ದೈವಸಂಕಲ್ಪವೂ ಇದ್ದಿತು. ನಾನು ಇನ್ನು ಬಹಳ ಹೊತ್ತು ಬದುಕಲಾರೆನು. ಪ್ರಾಣೋತ್ಕ್ರಮಣ ಕಾಲವು ಸನ್ನಿಹಿತವಾಯಿತು. ಅದಕ್ಕೆ ಮುಂಚಿತವಾಗಿಯೇ ನಾನು ಮಾಡಬೇಕಾದ ಕಾರ್ಯವು ಬಹಳವಿರುವುದು. ಆದುದರಿಂದ ಈ ಕ್ಷಣದಲ್ಲಿಯೇ ನನ್ನನ್ನು ಆ ಭೋಜನಶಾಲೆಯಲ್ಲಿರುವ ನನ್ನ ವಾಸಗೃಹಕ್ಕೆ ಕರೆದುಕೊಂಡು ಹೋಗು.

ಒಡನೆಯೇ ಪರಂತಪನು ಮಾಧವನನ್ನು ಪಲ್ಲಕ್ಕಿಯಲ್ಲಿ ಮಲಗಿಸಿಕೊಂಡು, ಅವನು ತೋರಿಸಿದ್ದ ವಾಸಗೃಹಕ್ಕೆ ಕರೆದುಕೊಂಡು ಹೋಗಿ, ಮಂಚದಮೇಲೆ ಮಲಗಿಸಿದನು.

**ಮಾಧವ**—ಅಯ್ಯಾ! ಪರಂತಪನೆ! ಆಪತ್ಕಾಲಕ್ಕೆ ಒದಗತಕ್ಕವನೇ ಬಂಧುವು; ಅವನೇ ಪುತ್ರನು. ಆದುದರಿಂದ, ಪ್ರಕೃತದಲ್ಲಿ ನನಗೆ ನೀನೇ ಸಮಸ್ತ ಬಂಧುವೂ ಆಗಿರುವೆ. ಈಗ ವಿಶೇಷವಾಗಿ ಮಾತನಾಡುವುದಕ್ಕೆ ನನಗೆ ಶಕ್ತಿಯಿಲ್ಲ. ಅದು ಹಾಗಿರಲಿ; ನನಗೆ ಇಂಥ ಅಪಾಯವನ್ನುಂಟುಮಾಡಿದ ದುರ್ಬುದ್ಧಿಗೆ ತಕ್ಕ ಪ್ರತೀಕಾರವನ್ನು ಮಾಡುವ ಭಾರವು ನಿನಗೆ ಸೇರಿದ್ದು. ನನ್ನನ್ನು ಹೊಡೆದಮೇಲೆ ಅವನು ಏನು ಮಾಡಿದನು? ಈಗ ಎಲ್ಲಿರುವನು?

**ಪರಂತಪ**—ಅವನ ಪ್ರಹಾರದಿಂದ ನೀನು ಮೂರ್ಛಿತನಾಗಿ ಕೆಳಗೆ ಬೀಳುವುದರೊಳಗಾಗಿಯೇ, ಅವನ ಶರೀರವು ಸಹಸ್ರ ಪ್ರಕಾರವಾಗಿ ಛೇದಿಸಿ ಉರುಳಿಸಲ್ಪಟ್ಟಿತು. ನಿನಗೆ ಉಂಟಾದ ಮೂರ್ಛೆಯೊಡನೆಯೇ, ಅವನಿಗೆ ದೀರ್ಘನಿದ್ರೆ ಪ್ರಾಪ್ತವಾಯಿತು. ಈಗ ಅವನು ತನ್ನ ದುಷ್ಕೃತ್ಯಗಳಿಗೆ ತಕ್ಕ ಶಿಕ್ಷೆಯನ್ನು ಯಮಪುರಿಯಲ್ಲಿ ಅನುಭವಿಸುತ್ತಿರುವನು.

**ಮಾಧವ**—ಹೀಗೆಯೇ ಆಗಬಹುದೆಂದು ನಾನು ಮೊದಲೇ ಭಾವಿಸಿದ್ದೆನು. ದೈವಾಧೀನದಿಂದ ನನ್ನ ಭಾವನೆಯಂತೆಯೇ ನಡೆಯಿತು. ಅಧರ್ಮವ್ಯಾಪ್ತದಿಂದ ಅನೇಕ ಕುಟುಂಬಗಳನ್ನು ಹಾಳುಮಾಡಿದ ಈ ದುರಾತ್ಮನ ಪಾಪಕೃತ್ಯಕ್ಕೆ ತಕ್ಕ ಪ್ರತಿಫಲವನ್ನು ತೋರಿಸಿ ಈ ನೀಚನನ್ನು ನಿಗ್ರಹಿಸಬೇಕೆಂಬ ನನ್ನ ಸಂಕಲ್ಪವು ದೈವಗತಿಯಿಂದ ನೆರವೇರಿತು. ಅವನ ದುಷ್ಕೃತ್ಯಕ್ಕೆ ಈ ಶಿಕ್ಷೆಯೂ ಕೂಡ ಅಲ್ಪವಾದುದು. ಅದು ಹಾಗಿರಲಿ; ಒಬ್ಬ ವೈದ್ಯನನ್ನು ಕರೆಯಿಸು.

**ಪರಂತಪ**—ಅಪ್ಪಣೆ.

ಹೊರಗೆ ಹೋಗಿ, ಪೂರ್ವದಲ್ಲಿಯೇ ತಾನು ಕರೆಸಿಟ್ಟಿದ್ದ ಜೀವಾನಂದನೆಂಬ ವೈದ್ಯನೊಡನೆ ಬಂದು, ಅಲ್ಲಿದ್ದವರನ್ನೆಲ್ಲ ಹೊರಗೆ ಕಳುಹಿಸಿದನು.

**ಮಾಧವ**—(ವೈದ್ಯನನ್ನು ಕುರಿತು) ಅಯ್ಯಾ! ಚಿಕಿತ್ಸಕನೆ! ನನಗೆ ಬಿದ್ದಿರುವ ಪ್ರಹಾರವನ್ನು ಚೆನ್ನಾಗಿ ಪರೀಕ್ಷಿಸು. ನಾನು ಇನ್ನೆಷ್ಟು ನಿಮಿಷಗಳವರೆಗೆ ಬದುಕಿರಬಹುದು?—ಹೇಳು.

**ಜೀವಾನಂದ**—(ಅವನನ್ನು ಚೆನ್ನಾಗಿ ಪರೀಕ್ಷಿಸಿ ನೋಡಿ) ಅಯ್ಯಾ! ಮಾಧವನೆ! ನಿನಗೆ ಸಂಭವಿಸಿರುವ ಅಪಾಯವು ಬಹಳ ಪ್ರಮಾದಕರವಾಗಿರುವುದು.

**ಮಾಧವ**—ಇದು ನನಗೆ ಮೊದಲೇ ಗೊತ್ತಾಗಿದ್ದಿತು. ಹುಟ್ಟಿದವರು ಎಂದಿಗಾದರೂ ಸಾಯಲೇ ಬೇಕು. ಸಾಯುವೆನೆಂಬ ವ್ಯಸನವು ಲೇಶಮಾತ್ರವೂ ನನಗಿಲ್ಲ. ಆದರೆ, ನನ್ನ ಆಸ್ತಿಯು ಅಪರಿಮಿತವಾಗಿರುವುದರಿಂದ, ನಾನು ಸಾಯುವಷ್ಟರೊಳಗಾಗಿ ಅದೆಲ್ಲವೂ ಸತ್ಪಾತ್ರದಲ್ಲಿ ವಿನಿಯೋಗವಾಗುವಂತೆ ಮಾಡಬೇಕೆಂಬ ಅಭಿಲಾಷೆಯು ನನಗೆ ಬಹಳವಾಗಿರು

ವುದು. ಇನ್ನು ಎಷ್ಟು ಹೊತ್ತಿನವರೆಗೆ ನಾನು ಬದುಕಿರಬಹುದು? ಅದನ್ನು ಭಯಪಡದೆ ಧೈರ್ಯವಾಗಿ ಹೇಳು.

**ಜೀವಾನಂದ**—ಅಯ್ಯಾ! ಮಾಧವನೆ! ನಿನ್ನ ಅವಸ್ಥೆಯನ್ನು ನೋಡಿದರೆ, ಇನ್ನು ಅರ್ಧಘಂಟೆಯೊಳಗಾಗಿಯೇ ನಿನ್ನ ಪ್ರಾಣವು ಉತ್ಕ್ರಮಿಸಿ ಹೋಗುವಂತೆ ತೋರುವುದು. ಆದರೂ, ನನ್ನ ಚಿಕಿತ್ಸಾಶಕ್ತಿಯಿಂದ ಇನ್ನು ಆರುಘಂಟೆಗಳಕಾಲ ನಿನ್ನನ್ನು ಬದುಕಿಸುವುದು ಸಾಧ್ಯವೆಂದು ತೋರುವುದು.

**ಮಾಧವ**—ಅಷ್ಟು ಮಾತ್ರವಾದರೆ ಸಾಕು. ಅಷ್ಟರೊಳಗೆ ನನ್ನ ಅಪರಿಮಿತವಾದ ಧನವೆಲ್ಲವನ್ನೂ ವಿನಿಯೋಗಿಸಬಹುದು. (ಪರಂತಪನನ್ನು ನೋಡಿ) ಅಯ್ಯಾ! ಪ್ರಿಯಮಿತ್ರನಾದ ಪರಂತಪನೆ! ನನ್ನ ಜೇಬಿನಲ್ಲಿ ಹತ್ತುಸಾವಿರ ವರಹಾಗಳನ್ನು ಬಾಳುವ ದಾದ ರತ್ನದ ಪದಕವೊಂದಿರುವುದು. ಅದನ್ನು ತೆಗೆದು ಇವನಿಗೆ ಕೊಡು. ಈತನು ಇಲ್ಲಿಯೇ ಇದ್ದುಗೊಂಡು ನನ್ನ ಧನವೆಲ್ಲವೂ ವಿನಿಯೋಗಿಸಲ್ಪಡುವವರೆಗೂ ನನ್ನ ಪ್ರಾಣಹೋಗದಂತೆ ಚಿಕಿತ್ಸೆಗಳನ್ನು ಮಾಡುತ್ತಿರಲಿ.

ಪರಂತಪನು ಆ ಆಭರಣವನ್ನು ತೆಗೆದು ಜೀವಾನಂದ ವೈದ್ಯನಿಗೆ ಕೊಡಲು. ಅವನು ಅತ್ಯಂತ ಸಂತುಷ್ಟನಾಗಿ, ಮಾಧವನಿಗೆ ಯಾತನೆಯಿಲ್ಲದ ಹಾಗೆ ಆ ಗಾಯಗಳಿಗೆ ತಕ್ಕ ಔಷಧಗಳನ್ನು ಹಾಕುತ್ತ, ಅವನ ಪ್ರಜ್ಞೆಗೂ ಪ್ರಾಣಕ್ಕೂ ಶೈಥಿಲ್ಯ ಸಂಭವಿಸದಂತೆ ಚಿಕಿತ್ಸೆಯನ್ನು ಮಾಡುತ್ತಿದ್ದನು.

**ಮಾಧವ**—ಅಯ್ಯಾ! ಪರಂತಪ! ಆಚೆಯ ಕೊಠಡಿಯಲ್ಲಿ ಅರ್ಥಪರನೆಂಬ ನಾಯರೊಬ್ಬನಿರುವನು. ಅವನನ್ನು ಕರೆದುಕೊಂಡು ಬಾ.

ಹೀಗೆ ಹೇಳುತ್ತಿರುವಷ್ಟರಲ್ಲಿಯೇ ಅರ್ಥಪರನು ಸಮೀಪಕ್ಕೆ ಬಂದು "ಅಯ್ಯಾ! ಮಾಧವನೆ! ನಾನು ಇಲ್ಲಿಯೇ ಬಂದಿರುವೆನು. ನೀನು ಈಗ ಅನುಭವಿಸುತ್ತಿರುವ ಅವಸ್ಥೆಯನ್ನು ನೋಡಿ ನನಗೆ ಬಹಳ ಸಂಕಟವಾಗುತ್ತಿರುವುದು" ಎಂದನು.

**ಮಾಧವ**—ನೀನು ಬಂದದ್ದು ಬಹಳ ಸಂತೋಷವಾಯಿತು. ಲೋಕದಲ್ಲಿ ಕಷ್ಟಕ್ಕೆ ಭಾಗಿಗಳಾಗದೆ ಇರತಕ್ಕವರು ಯಾರುತಾನೆ ಇರುವರು? ಇದಕ್ಕಾಗಿ ನೀನು ಚಿಂತಿಸಬೇಡ. ಈಗ ನಿನ್ನಿಂದ ನನಗೆ ಕೆಲವು ಕಾರ್ಯಗಳಾಗಬೇಕಾಗಿರುವುದರಿಂದ, ಅವನ್ನು ನ್ಯಾಯಶಾಸ್ತ್ರಾನುಸಾರವಾಗಿ ನಡೆ

ಯಿಸು ಅದಕ್ಕೆ ತಕ್ಕ ದ್ರವ್ಯ ಲಾಭವನ್ನು ನೀನು ಪಡೆಯುವೆ. (ಪರಂತಪನನ್ನು ಕುರಿತು) ಅಯ್ಯಾ! ಪರಂತಪನೆ! ಇಲ್ಲಿರತಕ್ಕ ಪರಿಜನರೆಲ್ಲರನ್ನೂ ಕರೆದುಕೊಂಡು ಸ್ವಲ್ಪಹೊತ್ತು ಹೊರಗಿರು. ಇವನೊಡನೆ ಸ್ವಲ್ಪ ಮಾತನಾಡಬೇಕಾಗಿರುವುದು. ಅನಂತರ ನಿನ್ನನ್ನು ಕರೆಯಿಸಿಕೊಳ್ಳುವೆನು.

**ಪರಂತಪ**— **ಅಪ್ಪಣೆ.** (ಹೊರಕ್ಕೆ ಹೋಗುವನು.)

**ಮಾಧವ**— ಅಯ್ಯಾ! ಅರ್ಥಪರನೆ! ಈಗ ನನ್ನ ಆಸ್ತಿಯನ್ನೆಲ್ಲ ಸತ್ಪಾತ್ರದಲ್ಲಿ ವಿನಿಯೋಗಿಸುವುದಕ್ಕಾಗಿ ಒಂದು ಉಯಿಲನ್ನು ಬರೆಯಬೇಕಾಗಿರುವುದು. ಈ ಕಾರ್ಯವನ್ನು ಮಾಡುವುದಕ್ಕಾಗಿ ನಿನಗೆ ಕೊಡಬೇಕಾದುದೇನು? ಸಂಕೋಚವಿಲ್ಲದೆ ಹೇಳು.

**ಅರ್ಥಪರ**— ಅಯ್ಯಾ! ಮಾಧವ! ನಿನ್ನ ವಿಷಯದಲ್ಲಿ ನಾನು ಇಷ್ಟೇ ಕೊಡಬೇಕೆಂದು ನಿರ್ಣಯಿಸಿ ಹೇಳುವುದಕ್ಕೆ ಶಕ್ತನಲ್ಲ. ನೀನು ಹೇಳಿದ ಕೆಲಸವನ್ನು ಕೃತಜ್ಞನಾಗಿ ನೆರವೇರಿಸುವೆನು. ನಿನಗೆ ತೋರಿದುದನ್ನು ಕೊಡಬಹುದು.

**ಮಾಧವ**— ಅಯ್ಯಾ! ಹಾಗಲ್ಲ. ಒಂದುವೇಳೆ ನಿನಗೆ ಅಪರಿಚಿತರಾದವರು ಇಂಥ ಉಯಿಲನ್ನು ಬರೆದುಕೊಡಬೇಕೆಂದು ಪ್ರಾರ್ಥಿಸಿದ ಪಕ್ಷದಲ್ಲಿ, ಅವರಿಂದ ನೀನು ಎಷ್ಟು ಧನವನ್ನು ತೆಗೆದುಕೊಳ್ಳುವೆಯೋ, ಅದನ್ನಾದರೂ ಹೇಳು.

**ಅರ್ಥಪರ**— ಇದು ಆಯಾ ಕಾರ್ಯಗಳಿಗೆ ಅನುರೂಪವಾಗಿರುವುದು. ಹತ್ತುವರಹಾಗಳು ಮೊದಲುಗೊಂಡು ನೂರು ವರಹಾಗಳ ವರೆಗೆ ತೆಗೆದುಕೊಳ್ಳುವುದುಂಟು.

**ಮಾಧವ**— ಹಾಗಾದರೆ ಈ ಕೆಲಸಕ್ಕಾಗಿ ನಿನಗೆ ಹತ್ತುಸಾವಿರ ವರಹಾಗಳನ್ನು ಕೊಡುತ್ತೇನೆ ಆ ಉಯಿಲನ್ನು ಬರೆಯುವುದು ಮಾತ್ರವಲ್ಲದೆ, ಅದರಂತೆ ಸ್ವಲ್ಪವೂ ಲೋಪವಿಲ್ಲದೆ ನಡೆಯಿಸತಕ್ಕ ಭಾರವು ನಿನ್ನದಾಗಿದೆ. ಈ ಕಾರ್ಯವನ್ನೆಲ್ಲ ಶ್ರದ್ಧೆಯಿಂದ ನಡೆಯಿಸು.

**ಅರ್ಥಪರ**— (ಸಂತೋಷದಿಂದ) ಅಯ್ಯಾ! ಮಾಧವನೇ! ಅನ್ಯತ್ರ ದೊರೆಯುವುದಕ್ಕಿಂತ ಸಹಸ್ರಾಂಶ ಅಧಿಕವಾದ ಧನವನ್ನು ನೀನು ಕೊಡು

ವುದಾಗಿ ಹೇಳುವಾಗ, ಇಂಥ ಉದಾರಸ್ವಭಾವವುಳ್ಳ ನಿನ್ನ ವಿಷಯದಲ್ಲಿ ಯಾರುತಾನೆ ಶ್ರದ್ಧೆಯಿಂದ ಕಾರ್ಯಗಳನ್ನು ನಡೆಯಿಸಲಾರರು ? ನೀನು ಹೇಳುವ ಕಾರ್ಯಗಳನ್ನೆಲ್ಲ ಕೃತಜ್ಞನಾಗಿ ನೆರವೇರಿಸುವೆನು.

ಅರ್ಥಪರನು ಈರೀತಿಯಲ್ಲಿ ಒಪ್ಪಿಕೊಂಡಕೂಡಲೆ, ಮಾಧವನು ತನ್ನ ಆಸ್ತಿಯ ವಿನಿಯೋಗದ ವಿವರವನ್ನು ಬರೆಯಿಸಿ, ಆ ಉಯಿಲಿನಂತೆ ಜಾರಿ ಮಾಡತಕ್ಕ ಭಾರವನ್ನೂ ಆತನಿಗೇ ಒಪ್ಪಿಸಿದನು. ಅರ್ಥಪರನೂ ಕೂಡ ಈ ಕಾರ್ಯಗಳನ್ನೆಲ್ಲ ನೆರವೇರಿಸಿದಮೇಲೆ ತನಗೆ ಸಲ್ಲತಕ್ಕ ಧನವನ್ನು ತಾನು ತೆಗೆದುಕೊಳ್ಳುವುದಾಗಿ ಒಪ್ಪಿಕೊಳ್ಳಲು, ಮಾಧವನು ಅರ್ಥಪರನನ್ನು ಅವನ ಕೆಲಸಕ್ಕೆ ಕಳುಹಿಸಿ, ಪರಂತಪನನ್ನು ಕರೆಯಿಸಿಕೊಂಡು, ಅಯ್ಯಾ ! ಪರಂತಪನೆ ! ನನಗೆ ಪ್ರಾಣೋತ್ಕ್ರಮಣಕಾಲವು ಸಮೀಪಿಸಿತು. ನಾನು ಹೇಳುವುದನ್ನೆಲ್ಲ ನೀನು ತಪ್ಪದೆ ನಡೆಯಿಸುವೆಯೆಂದು ನಾನು ನಂಬಿದ್ದೇನೆ—ಎಂದನು.

**ಪರಂತಪ**—ಅಯ್ಯಾ ! ಮಾಧವನೆ ! ನೀನು ಹೇಳುವುದನ್ನೆಲ್ಲ ಅವಶ್ಯನಾಗಿ ನಡೆಯಿಸುವೆನು ; ಅಥವಾ, ಆ ಪ್ರಯತ್ನದಲ್ಲಿ ಪ್ರಾಣವನ್ನಾದರೂ ಒಪ್ಪಿಸುವೆನು.

**ಮಾಧವ**—ಇನ್ನು ಸ್ವಲ್ಪಹೊತ್ತಿನಲ್ಲಿಯೇ ನಾನು ಸ್ವರ್ಗಸ್ಥನಾಗುವೆನು. ನನ್ನ ಶವವನ್ನು ಕಲ್ಯಾಣನಗರಕ್ಕೆ ತೆಗೆಸಿಕೊಂಡು ಹೋಗು. ಅಲ್ಲಿ ನನ್ನ ಸಹೋದರನಾದ ಸುಮಿತ್ರನಿರುವನು. ನಾನು ನಿನ್ನ ಕೈಯಲ್ಲಿ ಕೊಟ್ಟಿರುವ ವಜ್ರದ ಉಂಗುರವನ್ನು ತೋರಿಸಿದರೆ, ಆಗ ಅವನು ನಿನ್ನನ್ನು ನನ್ನಂತೆಯೇ ವಿಶ್ವಾಸದಿಂದ ನೋಡುವನು. ನನ್ನ ಈ ವೃತ್ತಾಂತವನ್ನೆಲ್ಲ ಅವನಿಗೆ ತಿಳಿಯಿಸಿ, ನನ್ನ ಉತ್ತರಕ್ರಿಯಾದಿಗಳನ್ನು ಸಾಂಗವಾಗಿ ನೆರವೇರಿಸುವಂತೆ ಮಾಡು. ಇದೋ ಈ ಯೆರಡುಕಾಗದಗಳನ್ನು ಅವನಿಗೆ ಕೊಡು. ಇದರಲ್ಲಿ ಒಂದು ನನ್ನ ಆಸ್ತಿಯ ವಿನಿಯೋಗವಿಷಯಕವಾದ ಉಯಿಲು ; ಮತ್ತೊಂದು ನಾನು ಅವನಿಗೆ ಬರೆದಿರುವ ಕಾಗದ. ಇವುಗಳನ್ನು ಅವನಿಗೆ ರಹಸ್ಯವಾಗಿ ತಲುಪಿಸು. ನಾನು ಬರೆದಿರುವ ಅಂಶಗಳನ್ನು ಆತನೇ ನಿನಗೆ ತಿಳಿಯಿಸುವನು. ನನ್ನ ಕೈ ಪೆಟ್ಟಿಗೆಯಲ್ಲಿ ಒಂದು ಕೋಟಿ ವರಹಾಗಳನ್ನು ಇಟ್ಟಿರುವೆನು. ಇದರಲ್ಲಿ ನಿನ್ನ ಪ್ರಯಾಣ ವೆಚ್ಚ ದೇಹಸಂಸ್ಕಾರ ಮೊದ

ಲಾದುವುಗಳಿಗೆ ೧ ಲಕ್ಷ ವರಹಾಗಳನ್ನು ಉಪಯೋಗಿಸಿಕೊಂಡು, ಅರ್ಥಪರನು ಉಯಿಲನ್ನು ಬರೆದು ಅದರಂತೆ ನಡೆಸಿದಮೇಲೆ ಅವನಿಗೆ ಹತ್ತುಸಾವಿರ ವರಹಾಗಳನ್ನು ಕೊಡು. ಉಳಿದ ಹಣದಲ್ಲಿ ೫೦ ಲಕ್ಷವನ್ನು ನನ್ನ ಅನುರಾಗಕ್ಕೆ ವಿಷಯಳಾಗಿದ್ದ ಕಾಮಮೋಹಿನಿಗೆ ಕೊಡು. ಉಳಿದುದನ್ನು ನಿನ್ನ ಸ್ವಂತಕ್ಕೆ ಉಪಯೋಗಿಸಿಕೊ. ಇದಲ್ಲದೆ, ನುಬುದ್ಧಿಯ ಆಸ್ತಿಯು ೫೦ ಕೋಟಿಗಳವರೆಗೂ ಆಗಬಹುದು. ದ್ಯೂತದಲ್ಲಿ ಮಾಡಿಕೊಂಡಿದ್ದ ನಿರ್ಣಯದ ಪ್ರಕಾರ, ಅದೆಲ್ಲವೂ ನನಗೆ ಸೇರತಕ್ಕುದಾಗಿದೆ. ಇದೆಲ್ಲವನ್ನೂ ರಾಜ್ಯಾಧಿಕಾರಿಗಳ ವಶಕ್ಕೆ ಮೂಲಧನವಾಗಿ ಕೊಟ್ಟು, ಅವರ ಬಡ್ಡಿಯನ್ನು, ದ್ಯೂತ, ವ್ಯಭಿಚಾರ, ಪರಸ್ವಾಪಹಾರ ಮೊದಲಾದ ದುಷ್ಕೃತ್ಯಗಳಿಂದ ಲೋಕಕಂಟಕಭೂತರಾದವರನ್ನು ನಿಗ್ರಹಿಸುವುದಕ್ಕೆ ಉಪಯೋಗಿಸಿಕೊಳ್ಳುವಂತೆ ಮಾಡಬೇಕು. ಇದಲ್ಲದೆ, ನನ್ನ ಮನೆಯಲ್ಲಿ ಕಬ್ಬಿಣದ ಪೆಟ್ಟಿಗೆಯೊಂದಿರುವುದು. ಅದರಲ್ಲಿ ೧೦ ಕೋಟಿ ದ್ರವ್ಯದವರೆಗೆ ಸಿಕ್ಕುವುದು; ಮತ್ತು, ನನಗೆ ಭವಿಷ್ಯತ್ತಿಯೂ ಬೇಕಾದಷ್ಟಿರುವುದು. ನನಗೆ ಸೇರಿದ ರತ್ನಾಕರವೆಂಬ ಪ್ರದೇಶದಲ್ಲಿ, ವಿಶೇಷವಾಗಿ ಚಿನ್ನದ ಗಣಿಗಳೂ ರತ್ನದ ಖನಿಗಳೂ ಇರುವುವು. ಅವುಗಳಲ್ಲಿ ಕೆಲಸಮಾಡಿಸಿ ರತ್ನಗಳನ್ನು ತೆಗೆಯುವ ಪ್ರಯತ್ನಗಳನ್ನು ಮಾಡು. ಅದರಿಂದ ಕುಬೇರನ ಐಶ್ವರ್ಯವನ್ನು ಪಡೆಯಬಹುದು. ಈ ಸಮಸ್ತ ಆಸ್ತಿಯನ್ನೂ ಉಯಿಲಿನಲ್ಲಿ ನಿನ್ನ ಹೆಸರಿಗೆ ಬರೆದಿರುವೆನು. ಇದೆಲ್ಲವನ್ನೂ ನಿನ್ನ ಸ್ವಾಧೀನಪಡಿಸಿಕೊಂಡು, ಅದರಲ್ಲಿ ಒಂಭತ್ತು ಕೋಟಿ ದ್ರವ್ಯವನ್ನು, ದುಷ್ಟನಿಗ್ರಹ ಶಿಷ್ಟಪರಿಪಾಲನಕ್ಕಾಗಿಯೂ, ವರ್ತಮಾನಪತ್ರಿಕೆಗಳ ಮೂಲಕ ಪ್ರಜೆಗಳಲ್ಲಿ ಐಕಮತ್ಯವನ್ನು ಕಲ್ಪಿಸುವುದಕ್ಕಾಗಿಯೂ, ವಿದ್ವಜ್ಜನರನ್ನು ಪ್ರೋತ್ಸಾಹಿಸುವುದಕ್ಕಾಗಿಯೂ ವಿನಿಯೋಗಿಸು. ನನ್ನ ಹಿರಿಯಣ್ಣನ ಮಗನಾದ ಶಂಬರನು ಬಹಳ ದುರಾತ್ಮನು. ಇವನು, ತನ್ನ ಆಸ್ತಿಯನ್ನೆಲ್ಲ ದುರ್ವ್ಯಯದಿಂದ ಕಳೆದುಕೊಂಡು, ಈಗ ನನ್ನ ಸರ್ವಸ್ವಕ್ಕೂ ತಾನೇ ಭಾಗಿಯಾಗಬೇಕೆಂದು ಬಹುಸಾಹಸ ಮಾಡುತ್ತಿರುವನು. ಇವನೇ, ನನ್ನಲ್ಲಿ ಕಾಮಮೋಹಿನಿಗೆ ಇದ್ದ ಅನುರಾಗವನ್ನು ತಪ್ಪಿಸಿ ಇಂಥ ಅವಸ್ಥೆಯನ್ನು ನನಗೆ ಉಂಟುಮಾಡಿದವನು. ಆದುದರಿಂದ, ನಿನಗೆ ನನ್ನ ಆಸ್ತಿಯನ್ನೆಲ್ಲ ಬರೆದಿರುವೆನು. ಇದರಿಂದ, ಅವನಿಗೆ ನಿನ್ನಮೇಲೆ

ಬಲವಾದ ದ್ವೇಷ ಹುಟ್ಟುವುದು. ನೀನು ಅಜಾಗರೂಕನಾಗಿದ್ದರೆ ನಿನಗೆ ಬಲವಾದ ಕೇಡುಂಟಾಗುವುದರಲ್ಲಿ ಸಂಶಯವಿಲ್ಲ. ಆದುದರಿಂದ, ನೀನು ಇವನ ವಿಷಯದಲ್ಲಿ ಮಾತ್ರ ಬಹಳ ಜಾಗರೂಕನಾಗಿರಬೇಕು. ಇದಲ್ಲದೆ, ರಹಸ್ಯವಾದ ಇನ್ನೊಂದು ವಿಷಯವನ್ನು ನಿನಗೆ ಹೇಳಬೇಕಾಗಿರುವುದು. ಏನೆಂದರೆ,—ಆ ಕಾಮಮೋಹಿನಿಯು ಬಹಳ ಸುಂದರಿಯಾಗಿಯೂ ಗುಣಾಢ್ಯಳಾಗಿಯೂ ಇರುವಳಾದುದರಿಂದ, ಸಮಸ್ತ ವಿಷಯದಲ್ಲಿಯೂ ನಿನಗೆ ಅನುರೂಪಳಾಗಿರುವಳು. ಇವಳಿಗೆ ಶಂಬರನ ವಿಷಯದಲ್ಲಿ ಸ್ವಲ್ಪವೂ ಅನುರಾಗವಿಲ್ಲ. ಆದರೂ. ಆ ನೀಚನು ಇವಳನ್ನು ಬಲಾತ್ಕಾರದಿಂದ ವಿವಾಹ ಮಾಡಿಕೊಳ್ಳುವುದಕ್ಕಾಗಿ ಬಹುಪ್ರಯತ್ನ ಮಾಡುತ್ತಲಿದ್ದಾನೆ. ದೈವಗತಿ ಹೇಗಿರುವುದೋ ತಿಳಿಯುವುದಕ್ಕಾಗುವುದಿಲ್ಲ. ಬಂದುವೇಳೆ ದೈವಕೃಪೆಯಿಂದ ಅವಳೇ ನಿನಗೆ ಲಭಿಸಿದರೂ ಲಭಿಸಬಹುದು. ಅದು ದೈವಸಂಕಲ್ಪವಿದ್ದಂತಾಗಲಿ. ನೀನು ಮಾತ್ರ ನಾನು ಹೇಳಿರುವ ಕಾರ್ಯಗಳಲ್ಲಿ ಯಾವುದನ್ನೂ ಮರೆಯದೆ ನೆರವೇರಿಸಿ ನನ್ನನ್ನು ಕೃತಕೃತ್ಯನನ್ನಾಗಿ ಮಾಡು. (ಎಂದು ಹೇಳಿ, ತನ್ನ ಕೈಪೆಟ್ಟಿಗೆಯ ಬೀಗದಕೈಯನ್ನು ಅವನ ಕೈಯಲ್ಲಿ ಕೊಟ್ಟು,) ಇನ್ನು ನಾನು ಸ್ವಲ್ಪ ವಿಶ್ರಮಿಸಿಕೊಳ್ಳುವೆನು. ವೈದ್ಯನನ್ನು ಕರೆ.

ಪರಂತಪನು ಒಡನೆಯೇ ಜೀವಾನಂದನನ್ನು ಕರೆತರುವನು.

**ಮಾಧವ—**(ಆತನನ್ನು ನೋಡಿ) ಅಯ್ಯಾ! ಚಿಕಿತ್ಸಕನೆ! ನನಗೆ ವೈಮರೆತು ಸ್ವಲ್ಪಹೊತ್ತು ಸುಖನಿದ್ರೆಯುಂಟಾಗುವಂತೆ ಏನಾದರೂ ಔಷಧವನ್ನು ಕೊಡು

**ಜೀವಾನಂದ—**ಅಪ್ಪಣೆ (ಔಷಧವನ್ನು ಕೊಡುವನು.)

ಮಾಧವನು ಆ ಔಷಧವನ್ನು ಪಾನಮಾಡಲು, ಕೂಡಲೆ ಅವನಿಗೆ ಚೆನ್ನಾಗಿ ನಿದ್ರೆ ಬಂದಿತು, ಜೀವಾನಂದನು ಅವನ ಹಾಸುಗೆಯ ಬಳಿಯಲ್ಲೇ ಕುಳಿತಿದ್ದನು. ಪರಂತಪನು, ತನ್ನ ದೂತನಾದ ಮಂಜೀರಕನನ್ನು ನೋಡುವುದಕ್ಕೋಸ್ಕರ ಬಾಗಲಿಗೆ ಬಂದು ನೋಡಿ, ಅವನನ್ನು ಕಾಣದೆ ಅಲ್ಲಿದ್ದ ಇತರ ಜನಗಳನ್ನು ಕೇಳಲು, ಅವರು ' ಅಯ್ಯಾ! ಪರಂತಪನೆ! ಮಂಜೀರಕನು ತನ್ನ ಕೈಯಲ್ಲಿ ಬಂದು ಸಣ್ಣ ತುಪಾಕಿಯನ್ನೂ ಗುಂಡುಗಳನ್ನೂ ಹಿಡಿದುಕೊಂಡು ಹೋಗುತ್ತಿರುವಾಗ, ಯಾಮಿಕರು ಕಂಡು, ಇವನೇ ಆ

ದುರ್ಬುದ್ಧಿಯನ್ನು ಸಂಹರಿಸಿರಬೇಕೆಂದು ನಿಶ್ಚಯಿಸಿ, ಅವನನ್ನು ನಗರಾಧ್ಯಕ್ಷನ ಬಳಿಗೆ ಕರೆದುಕೊಂಡು ಹೋದರು' ಎಂದು ಹೇಳಿದರು. ಕೂಡಲೆ ಪರಂತಪನು ಸ್ವಲ್ಪ ವ್ಯಾಕುಲನಾಗಿ, ಮಾಧವನು ಮಲಗಿರುವ ಸ್ಥಳಕ್ಕೆ ಬಂದು, ಅವನ ದೇಹಸ್ಥಿತಿಯ ವಿಷಯದಲ್ಲಿ ಜೀವಾನಂದ ವೈದ್ಯನನ್ನು ಕೇಳಲು, ಜೀವಾನಂದನು, ಇನ್ನು ೩-೪ ಘಂಟೆಗಳವರೆಗೆ ಇವನ ಪ್ರಾಣಕ್ಕೆ ಯಾವ ಅಪಾಯವೂ ಇಲ್ಲವೆಂದನು. ಆಗ ಪರಂತಪನು ವೈದ್ಯನನ್ನು ಎರಡು ಘಂಟೆಗಳ ಕಾಲ ಅವಕಾಶ ಕೇಳಿಕೊಂಡು, ತ್ವರೆಯಿಂದ ನಗರಾಧ್ಯಕ್ಷನ ಆಸ್ಥಾನಕ್ಕೆ ಬಂದು ವಿಚಾರಿಸಲು, ಮಂಜೀರಕನು ತಪ್ಪಿತಸ್ಥನೆಂದು ತಿಳಿದುದರಿಂದ ಅವನನ್ನು ಕಾರಾಗೃಹದಲ್ಲಿಟ್ಟಿರುವರೆಂದು ಅಲ್ಲಿದ್ದ ಸೇವಕರಿಂದ ತಿಳಿಯಬಂದಿತು. ಅಲ್ಲಿಂದ ಕಾರಾಗೃಹದ ಬಾಗಲಿಗೆ ಬಂದು ನೋಡಲು, ಬಾಗಿಲು ಬೀಗ ಹಾಕಿದ್ದಿತು. ಅಲ್ಲಿ ಕಾವಲಾಗಿದ್ದ ಯಾಮಿಕನೊಬ್ಬನು ಮಾತ್ರ ಬಾಗಿಲಲ್ಲಿ ನಿಂತಿದ್ದನು. ಪರಂತಪನು ಆ ಮಾರ್ಗವಾಗಿ ಬರಲು, ಅಲ್ಲಿದ್ದ ಕಾವಲುಗಾರನು ಇವನನ್ನು ನೋಡಿ 'ಯಾರು? ಇಷ್ಟುಹೊತ್ತಿನಲ್ಲಿ ಇಲ್ಲಿಗೆ ಬರಲು ಕಾರಣವೇನು? ಹೊರಟುಹೋಗು! ಇಲ್ಲದಿದ್ದರೆ ನಿನ್ನನ್ನು ಈಗಲೇ ಗುಂಡಿನಿಂದ ಹೊಡೆಯುವೆನು' ಎಂದು ಗದ್ದರಿಸಿದನು. ಆಗ ಪರಂತಪನು 'ಅಯ್ಯಾ! ನಾನು ಪರದೇಶಿ. ದಾರಿ ತಿಳಿಯದೆ ಇಲ್ಲಿಗೆ ಬಂದೆನು. ಮನ್ನಿಸು. ಹೊರಟುಹೋಗುತ್ತೇನೆ' ಎಂದು ಹೇಳಿ, ಬೇರೆ ಮಾರ್ಗದಿಂದ ಅವನ ಹಿಂದುಗಡೆಯಲ್ಲಿ ಬಂದು, ಥಟ್ಟನೆ ಅವನಮೇಲೆ ಬಿದ್ದು, ಅವನ ಕೈಯಲ್ಲಿದ್ದ ಬಂದೂಕವನ್ನು ಕಿತ್ತು ಬಿಸುಟು, ಅವನನ್ನು ನೆಲಕ್ಕೆ ಕೆಡವಿಕೊಂಡು, ಬಾಯಿಗೆ ಬಟ್ಟೆಯನ್ನು ತುರುಕಿ, ಕೈಕಾಲುಗಳನ್ನು ಬಿಗಿದು ಕಟ್ಟಿಹಾಕಿದನು. ಆಮೇಲೆ ಅವನ ಮೈಯನ್ನೆಲ್ಲ ಶೋಧಿಸುತಿರಲು, ಅವನ ಜೇಬಿನಲ್ಲಿ ಒಂದು ಬೀಗದಕೈ ಸಿಕ್ಕಿತು. ಅದನ್ನು ತಂದು ಕಾರಾಗೃಹದ ಬಾಗಿಲನ್ನು ತೆಗೆದು 'ಮಂಜೀರಕಾ! ಎಲ್ಲಿರುವೆ?' ಎಂದು ಗಟ್ಟಿಯಾಗಿ ಕೂಗಿದನು. ಆಗ ಒಳಗಿನಿಂದ 'ಸ್ವಾಮಿ! ಇಲ್ಲಿರುವೆನು' ಎಂಬ ಶಬ್ದವು ಕೇಳಬಂದಿತು. ಆಗ ಒಳಮನೆಯ ಚಿಲುಕವನ್ನು ತೆಗೆಯಲು, ಮಂಜೀರಕನು ಅತಿ ವಿಸ್ಮಿತನಾಗಿ ಹೊರಕ್ಕೆ ಬಂದನು. ಅವನನ್ನು ಅತಿಸಂತೋಷದಿಂದ ಆಲಿಂಗಿಸಿಕೊಂಡು, ತಾನು ಮಾಡಿದ ಸಾಹಸ

ಕಾರ್ಯಗಳನ್ನೆಲ್ಲ ಅವನಿಗೆ ರಹಸ್ಯವಾಗಿ ಹೇಳಿ, ಮೊದಲಿದ್ದಂತೆಯೇ ಆ ಬಾಗಿಲುಗಳನ್ನೆಲ್ಲ ಭದ್ರಪಡಿಸಿ, ಆ ಬೀಗದಕೈಯನ್ನು ಕಾವಲುಗಾರನ ಜೇಬಿನಲ್ಲಿಯೇ ಹಾಕಿ, ತನ್ನಲ್ಲಿದ್ದ ೧೦ ವರಹಗಳನ್ನು ಅವನ ಬಟ್ಟೆಯಲ್ಲಿ ಕಟ್ಟಿ, ಆತನ ಕ್ಷಮೆಯನ್ನು ಕೇಳಿಕೊಂಡು, ಅಧಿಕಾರಿಗಳಿಂದ ಅವನಿಗೆ ಯಾವ ತೊಂದರೆಯೂ ಬಾರದಿರಲೆಂದು ಅವನ ಕಟ್ಟುಗಳನ್ನು ಬಿಚ್ಚದೆ, ಮಂಜೀರಕನೊಡನೆ ಮಾಧವನಿದ್ದ ಸ್ಥಳಕ್ಕೆ ಹೊರಟುಬಂದು, ಮಂಜೀರಕನಿಗೆ ವೇಷಾಂತರವನ್ನು ಹಾಕಿ ‘ನೀನು ಕಲ್ಯಾಣನಗರಕ್ಕೆ ಹೋಗಿ ಅಲ್ಲಿರು. ನಾನು ಕೂಡಲೆ ಅಲ್ಲಿಗೆ ಬರುವೆನು’ ಎಂದು ಹೇಳಿ, ಕಳುಹಿಸಿದನು. ಮಾಧವನು ಆಗತಾನೆ ಎಚ್ಚರಗೊಂಡು, ಅರ್ಥಪರನನ್ನೂ ಪರಂತಪನನ್ನೂ ಸಮೀಪಕ್ಕೆ ಕರೆದು, ತನ್ನ ಹಾಸುಗೆಯ ಬಳಿಯಲ್ಲಿ ಕುಳ್ಳಿರಿಸಿಕೊಂಡು, ಜೀವಾನಂದನನ್ನು ನೋಡಿ ‘ಅಯ್ಯಾ! ಮಿತ್ರನೆ! ನೀನು ಮಾಡಿದ ಪರಮೋಪಕಾರಕ್ಕಾಗಿ ನಾನು ಬಹಳ ಕೃತಜ್ಞನಾಗಿರುವೆನು.’ ಎಂದು ಹೇಳಿ, ತನ್ನ ಕತ್ತಿನಲ್ಲಿ ಹಾಕಿಕೊಂಡಿದ್ದ ಮುತ್ತಿನ ಸರವನ್ನು ತೆಗೆದು ಅವನ ಕೈಯಲ್ಲಿ ಕೊಟ್ಟು, ‘ನಿನಗೆ ವಾಗ್ದಾನ ಮಾಡಿದ್ದುದಕ್ಕಿಂತ ಹೆಚ್ಚಾದ ದ್ರವ್ಯವನ್ನು ನಿನಗೆ ಕೊಟ್ಟಿರುವೆನು. ಈವೊಂದೊಂದು ಮುತ್ತನ್ನು ವಿಕ್ರಯಿಸಿಕೊಂಡರೂ, ನಿನಗೆ ಜೀವಾವಧಿ ರಾಜಭೋಗಗಳನ್ನು ಅನುಭವಿಸುವುದಕ್ಕೆ ಬೇಕಾದಷ್ಟು ದ್ರವ್ಯ ಲಭಿಸುವುದು. ಇನ್ನುಮೇಲೆ ನೀನು ಸ್ವತಂತ್ರನಾಗಿ ಜೀವಿಸಿಕೊಳ್ಳಬಹುದು. ಇದುವರೆಗಿನಂತೆ ನೀನು ಜೀವನಾರ್ಥವಾಗಿ ಶ್ರಮಪಡಬೇಕಾದುದಿಲ್ಲ. ನಿನ್ನಿಂದ ನನಗೆ ಆಗಬೇಕಾದ ಕೆಲಸವಿನ್ನೊಂದಿರುವುದು. ಅದನ್ನು ನೆರವೇರಿಸಿಕೊಡುವುದಾಗಿ ನೀನು ವಾಗ್ದಾನ ಮಾಡಿದರೆ ಹೇಳುತ್ತೇನೆ.’ ಎಂದನು.

ಜೀವಾನಂದ—ಅಯ್ಯಾ! ನೀನು ನನಗೆ ಮಾಡಿರುವ ಉಪಕಾರಕ್ಕೆ, ನಾನು ಯಾವ ಕೆಲಸವನ್ನು ಮಾಡಿದರೆತಾನೆ ಸಾಕಾಗುವುದು? ಜೀವನಾರ್ಥವಾಗಿ ಅಹೋರಾತ್ರಿಗಳಲ್ಲಿಯೂ ಶ್ರಮಪಡುತ್ತಿದ್ದ ನನಗೆ ಸುಖವಾದ ಜೀವಿಕೆಯನ್ನು ಕಲ್ಪಿಸಿದ ನಿನಗೆ, ನಾನೆಂದಿಗೂ ತಕ್ಕ ಪ್ರತ್ಯುಪಕಾರಮಾಡಲಾರೆನು. ನನ್ನ ಕೈಯಲ್ಲಿ ಸಾಧ್ಯವಾದುವುಗಳನ್ನೆಲ್ಲ ಶಿರಸಾ ವಹಿಸಿ ಮಾಡುವೆನು, ಹೇಳು.

**ಮಾಧವ**—ನಿನ್ನ ಕೈಯಲ್ಲಿ ಕೊಟ್ಟಿರುವುದಲ್ಲದೆ ನನ್ನ ಪೆಟ್ಟಿಗೆಯಲ್ಲಿ ಉಳಿದಿರುವ ರತ್ನಗಳನ್ನು ವಿಕ್ರಯಿಸಿದರೆ, ೧೦ ಕೋಟಿ ವರಹಗಳಿಗಿಂತ ಹೆಚ್ಚಾಗಿಯೇ ಬರಬಹುದು. ಅವರಲ್ಲಿ ೨ ಕೋಟಿ ದ್ರವ್ಯಗಳಿಂದ, ವಿಶಾಲವಾಗಿಯೂ ಅನುಕೂಲವಾಗಿಯೂ ಇರುವ ಒಂದು ವೈದ್ಯಶಾಲೆಯನ್ನು ಕಟ್ಟಿಸಬೇಕು. ಉಳಿದುದನ್ನು ರಾಜ್ಯಾಧಿಕಾರಿಗಳಲ್ಲಿ ಮೂಲ ಧನವಾಗಿ ಕೊಟ್ಟು, ಅವರ ವೃದ್ಧ್ಯಂಶವನ್ನು, ದರಿದ್ರರಾಗಿಯೂ ರೋಗಪೀಡಿತರಾಗಿಯೂ ಇರುವ ಜನಗಳ ಅನ್ನಪಾನಗಳಿಗಾಗಿಯೂ ಔಷಧಗಳಿಗಾಗಿಯೂ ಉಪಯೋಗಿಸುವಂತೆ ಮಾಡಬೇಕು. ನೀನು ದುಡ್ಡು ಕೊಡತಕ್ಕವರಿಗೆ ಎಷ್ಟು ಆದರದಿಂದ ಚಿಕಿತ್ಸೆ ಮಾಡುತಿದ್ದೆಯೋ, ಹಾಗೆ ಆ ವೈದ್ಯಶಾಲೆಗೆ ಬರತಕ್ಕಂಥ ರೋಗಿಗಳಿಗೆ ಪಾರಮಾರ್ಥಿಕವಾಗಿ ಚಿಕಿತ್ಸೆ ಮಾಡುತಿರಬೇಕೆಂಬುದೇ ನನ್ನ ಪ್ರಾರ್ಥನೆ. ಈ ಧರ್ಮವು ಆಚಂದ್ರಾರ್ಕವಾಗಿ ನಡೆಯುವಂತೆ, ನೀನೂ ಪರಂತಪನೂ ಪರ್ಯಾಲೋಚಿಸಿ, ನಿಮ್ಮಿಬ್ಬರಿಗೂ ಸೂಕ್ತವಾದ ರೀತಿಯಲ್ಲಿ ನಡೆಯಿಸಬೇಕು. ಈ ರತ್ನಗಳನ್ನೆಲ್ಲ ಏತದರ್ಥವಾಗಿ ಈಗಲೇ ರಾಜ್ಯಾಧಿಕಾರಗಳಲ್ಲಿ ಒಪ್ಪಿಸಿ-ನನ್ನ ಮನೋರಥವು ಸಫಲವಾಗುವುದೆಂಬ ಪ್ರತ್ಯಯವನ್ನು ಉಂಟುಮಾಡಿದರೆ, ನಾನು ಸಂತೋಷದಿಂದ ಪ್ರಾಣಗಳನ್ನು ಬಿಡುವೆನು.

**ಪರಂತಪ**—ನಿನ್ನ ಮನೋರಥ ನೆರವೇರುವಂತೆ ಈಗಲೇ ಮಾಡುವೆವು. ಅಯ್ಯಾ! ಚಿಕಿತ್ಸಕನೆ! ಇವನನ್ನು ನೋಡಿಕೊಂಡಿರು. ನಾನು ಅಯ್ದು ನಿಮಿಷಗಳೊಳಗಾಗಿ ಈ ಪಟ್ಟಣದ ನ್ಯಾಯಾಧಿಪತಿಯನ್ನು ಕರೆದುಕೊಂಡು ಬರುವೆನು. ಮಾಧವನು ಈ ಅನ್ತ್ಯಾವ್ಯಶವಾದ ಧರ್ಮವನ್ನು ತನ್ನ ಕೈಯಿಂದಲೇ ಮಾಡಲಿ.

**ಜೀವಾನಂದ**—ಆಗಲಿ, ನೀನು ಜಾಗ್ರತೆಯಾಗಿ ಹೋಗಿ ಬಾ.

ಪರಂತಪನು ಕೂಡಲೆ ನ್ಯಾಯಾಧಿಪತಿಯ ಬಳಿಗೆ ಹೋಗಿ, ಈ ಅಂಶಗಳನ್ನು ಅವನಿಗೆ ಸಂಕ್ಷೇಪವಾಗಿ ತಿಳಿಯಿಸಿ, ಅವನನ್ನು ಕರೆದುಕೊಂಡು ಬಂದನು. ಮಾಧವನು ಅವನಿಗೆ ಪ್ರತ್ಯುತ್ಥಾನಮಾಡಲಾರದೆ ಶ್ರಮಪಡುತಿದ್ದುದನ್ನು ನೋಡಿ, ಪರಂತಪನೂ ಜೀವಾನಂದನೂ ಅವನನ್ನು ಎತ್ತಿ ಕೂರಿಸಿದರು. ಆಗ ಮಾಧವನು ನ್ಯಾಯಾಧಿಪತಿಯನ್ನು ನೋಡಿ "ಅಯ್ಯಾ!

ನ್ಯಾಯಾಧಿಪತಿಯೇ! ನೀನು ಸರಿಯಾದ ಕಾಲಕ್ಕೆ ಸಿಕ್ಕಿದುದು, ನನ್ನ ಸುಕೃತಾತಿಶಯವನ್ನು ತೋರಿಸುತ್ತದೆ. ನಾನು ಈಗ ಕೃತಕೃತ್ಯನಾದೆನು. ಇದೋ ಈ ರತ್ನಗಳನ್ನು ತಗೆದುಕೊ. ಈ ಪರಂತಪನೂ ವೈದ್ಯನೂ ನನಗೆ ಪರಮಾಪ್ತರು. ನೀನು ಇವರೊಡನೆ ಸೇರಿಕೊಂಡು ಈ ಧರ್ಮವನ್ನು ನೆರವೇರಿಸಿದರೆ, ಇದರಿಂದ ಉಂಟಾಗತಕ್ಕ ಸುಕೃತಕ್ಕೆ ನೀವೂ ಭಾಗಿಗಳಾಗುವಿರಿ. ಇನ್ನು ನನಗೆ ಕಾಲ ಸಮೀಪಿಸಿತು. ಈ ಅಂಶಕ್ಕೆ ನೀನು ಒಪ್ಪಿದ ಪಕ್ಷದಲ್ಲಿ, ನಾನು ಸಂತುಷ್ಟನಾಗಿ ಪ್ರಾಣಬಿಡುವೆನು.

**ನ್ಯಾಯಾಧಿಪತಿ**—ನಾನು ಬಹು ಕಾಲದಿಂದ ನೀನು ಪರೋಪಕಾರಪರನೆಂಬುದನ್ನು ಕಿವಿಯಿಂದ ಕೇಳುತ್ತಿದ್ದೆನು. ಆದರೆ, ಈಗ ಅದೆಲ್ಲವೂ ನನಗೆ ಪ್ರತ್ಯಕ್ಷಾನುಭವಕ್ಕೆ ಬಂದಿತು. ಇಂಥ ಧರ್ಮಪರಾಯಣರನ್ನು ನಾನೆಲ್ಲಿಯೂ ನೋಡಿರಲಿಲ್ಲ. ನೀನೇ ಧನ್ಯನು. ಅಪರಿಮಿತವಾದ ಧನವನ್ನು ಸಂಪಾದಿಸಿ, ತಾವೂ ಅನುಭವಿಸದೆ, ಸತ್ಪಾತ್ರದಲ್ಲಿಯೂ ವಿನಿಯೋಗಿಸದೆ, ಧನಪಿಶಾಚಗಳಂತೆ ಬದುಕಿ, ಕೊನೆಗೆ ಚೋರರೇ ಮೊದಲಾದ ಅಪಾತ್ರಗಳಲ್ಲಿ ತಮ್ಮ ದ್ರವ್ಯವೆಲ್ಲ ಸೇರಿಹೋಗುವಂತೆ ಮಾಡಿದ, ಅನೇಕಜನ ಮೂಢರನ್ನು ನಾವು ನೋಡಿರುವೆವು. ಸಂಪಾದಿಸಿದ ದ್ರವ್ಯಕ್ಕೆ ದಾನಭೋಗಗಳೆರಡರಿಂದಲೇ ಸಾರ್ಥಕ್ಯವುಂಟಾಗುವುದು. ಇವೆರಡೂ, ಪುಣ್ಯವಂತರಿಗಲ್ಲದೆ ಇತರರಿಗೆ ಲಭಿಸಲಾರದು. ಈ ದಿವಸ ನೀನು ನಿನ್ನ ದ್ರವ್ಯವನ್ನು ವಿನಿಯೋಗಿಸಿರತಕ್ಕ ರೀತಿಯೇ ನಿನ್ನ ಪುಣ್ಯಾತಿಶಯವನ್ನು ತೋರಿಸುತ್ತಲಿದೆ. ಈ ವಿಷಯದಲ್ಲಿ ನಿನಗೆ ಯಾರುತಾನೆ ಸಹಾಯಕರಾಗುವುದಿಲ್ಲ? (ಪರಂತಪನನ್ನು ನೋಡಿ) ಅಯ್ಯಾ! ಪರಂತಪ! ಅದೋ ಅಲ್ಲಿ ನೋಡು. ಆ ಮಾರ್ಗದಲ್ಲಿ ಈ ದೇಶದ ಕೋಶಾಧ್ಯಕ್ಷನು ಹೋಗುತ್ತಿರುವಂತೆ ಕಾಣುವುದು. ಪಾರಮಾರ್ಥಿಕರಾದವರಿಗೆ ಮನೋರಥ ಪರಿಪೂರ್ತಿಗೆ ಬೇಕಾದ ಸಾಧನೆಗಳೆಲ್ಲ ಅಪ್ರಾರ್ಥಿತವಾಗಿ ಒದಗುವುದು ಸಹಜವಾದುದೇ ಸರಿ! ಜಾಗ್ರತೆಯಾಗಿ ಹೋಗಿ ಅವನನ್ನು ಕರೆದುಕೊಂಡು ಬಾ

ಪರಂತಪನು ಅವನನ್ನು ಕರೆದುಕೊಂಡು ಬಂದನು. ಆಗ ಆ ಕೋಶಾಧ್ಯಕ್ಷನು ನ್ಯಾಯಾಧಿಪತಿಯನ್ನು ನೋಡಿ “ಅಯ್ಯಾ! ನ್ಯಾಯಾಧಿಪತಿಯೆ! ನಾನು ನಿನ್ನನ್ನೇ ಹುಡುಕುತಿದ್ದೆನು. ಈ ದ್ಯೂತಶಾಲೆಯಲ್ಲಿ,

ದುರ್ಬುದ್ಧಿಯೆಂಬವನು, ದ್ಯೂತದಲ್ಲಿ ಉಂಟಾದ ಕಲಹದಿಂದ ಕೋಪಪರವಶನಾಗಿ, ತನ್ನನ್ನು ದ್ಯೂತದಲ್ಲಿ ಸೋಲಿಸಿ ಸರ್ವಸ್ವವನ್ನೂ ಗೆದ್ದುಕೊಂಡ ಮಾಧವನೆಂಬ ಒಬ್ಬ ಮನುಷ್ಯನನ್ನು, ಕಠಾರಿಯಿಂದ ತಿವಿದು ಕೊಂದನೆಂಬುದಾಗಿಯೂ, ಕೂಡಲೆ ಮಾಧವನ ಕಡೆಯವನಾದ ಯಾವನೋ ಒಬ್ಬನು ಒಬ್ಬರಿಗೂ ತಿಳಿಯದಂತೆ ತುಪಾಕಿಯನ್ನು ಹಾರಿಸಿ ದುರ್ಬುದ್ಧಿಯನ್ನು ಕೊಂದನೆಂಬುದಾಗಿಯೂ, ದುರ್ಬುದ್ಧಿಯನ್ನು ಕೊಂದವನೆಂಬ ಸಂಶಯದಿಂದ ಒಬ್ಬ ಮನುಷ್ಯನನ್ನು ಯಾಮಿಕರು ಹಿಡಿದು ಕಾರಾಗೃಹದಲ್ಲಿ ಇಟ್ಟಿದ್ದುದಾಗಿಯೂ, ಹಾಗೆ ಇಡಲ್ಪಟ್ಟ ಮನುಷ್ಯನ ಮಿತ್ರನಾವನೋ ಒಬ್ಬನು ಕಾರಾಗೃಹದ ಬಳಿಗೆ ಹೋಗಿ ಅಲ್ಲಿದ್ದ ಕಾವಲುಗಾರನನ್ನು ಹಿಡಿದು ಅವನ ಕೈಕಾಲುಗಳನ್ನು ಕಟ್ಟಿ ಕೆಡವಿ ಬಾಯಿಗೆ ಬಟ್ಟೆಯನ್ನು ತುರುಕಿ ಅವನನ್ನು ಬಿಡಿಸಿಕೊಂಡು ಹೋದುದಾಗಿಯೂ ವರ್ತಮಾನ ತಿಳಿಯಿತು. ಇದರ ನಿಜಾಂಶವನ್ನು ತಿಳಿಯುವುದಕ್ಕಾಗಿ, ನಗರಾಧ್ಯಕ್ಷನನ್ನು ಕರೆದುಕೊಂಡು ಆ ದ್ಯೂತಶಾಲೆಗೆ ಹೋಗಿ ನೋಡುವಲ್ಲಿ, ಅಲ್ಲಿ ದುರ್ಬುದ್ಧಿಯ ತಲೆಯು ಅನೇಕ ಶಕಲಗಳಾಗಿ ಬಿದ್ದಿದ್ದಿತು. ದುರ್ಬುದ್ಧಿಗೂ ಮಾಧವನಿಗೂ ದ್ಯೂತದಲ್ಲಿ ನಡೆದಿದ್ದ ನಿರ್ಣಯಪತ್ರಿಕೆಯು ಅಲ್ಲಿದ್ದ ಜನಗಳ ವಶದಲ್ಲಿದ್ದಿತು. ಅದಕ್ಕಾಗಿ ಅಲ್ಲಿದ್ದ ಪ್ರತಿಯೊಬ್ಬರ ವಾಙ್ಮೂಲಗಳನ್ನೂ ಅಮೂಲಾಗ್ರವಾಗಿ ಪತ್ರಿಕಾಮುಖೇನ ತೆಗೆದುಕೊಂಡು, ಆ ಜನರನ್ನೂ ಅವರಲ್ಲಿದ್ದ ಪತ್ರಿಕೆಯನ್ನೂ ದಂಡಾಧ್ಯಕ್ಷನ ಬಳಿಗೆ ಕಳುಹಿಸಿ, ದುರ್ಬುದ್ಧಿಯ ಆಸ್ತಿಯಾವುದೂ ಹೋಗದಂತೆ ನೋಡಿಕೊಳ್ಳುವುದಕ್ಕಾಗಿ ಅವನ ಮನೆಬಾಗಲಿಗೂ ದ್ಯೂತಾಲಯಕ್ಕೂ ಯಾಮಿಕರನ್ನು ಕಾವಲಿಟ್ಟು, ಆ ಯಾಮಿಕಾಧಿಕಾರಿಯು ದಂಡಾಧ್ಯಕ್ಷನೊಡನೆ ನಿನ್ನನ್ನೇ ಹುಡುಕಿಕೊಂಡು ನಿನ್ನ ಮನೆಯ ಕಡೆಗೆ ಹೋಗುತ್ತಿರುವನು." ಎಂದು ಹೇಳಿದನು.

**ನ್ಯಾಯಾಧಿಪತಿ**—ಅಯ್ಯಾ! ಪರಂತಪ! ಜಾಗ್ರತೆಯಾಗಿ ಹೋಗಿ ಅವರನ್ನೂ ಇಲ್ಲಿಯೇ ಕರೆದುಕೊಂಡು ಬಾ.

ಪರಂತಪನು ಹೋದಕೂಡಲೆ ಕೋಶಾಧಿಕಾರಿಯನ್ನು ನೋಡಿ "ಅಯ್ಯಾ! ಕೋಶಾಧ್ಯಕ್ಷನೆ! ಇದೋ ಇವನೇ ಮಾಧವನು. ದುರ್ಬುದ್ಧಿಯ ಪ್ರಹಾರದಿಂದ ಮೂರ್ಛೆಹೋದಕೂಡಲೆ ಈ ವೈದ್ಯನೂ ನಿನ್ನನ್ನು

ಕರೆಯುವುದಕ್ಕೆ ಬಂದಿದ್ದ ಆ ಪರಂತಪನೂ ಸೇರಿ ಇವನನ್ನು ಇಲ್ಲಿಗೆ ಎತ್ತಿಕೊಂಡು ಬಂದು ಉಪಚರಿಸುತ್ತಲಿದ್ದಾರೆ. ಈ ವೈದ್ಯನು, ತನ್ನ ಸರ್ವಪ್ರಯತ್ನದಿಂದಲೂ ಚಿಕಿತ್ಸೆ ಮಾಡಿ, ಇದುವರೆಗೂ ಇವನ ಪ್ರಾಣಕ್ಕೆ ಅಪಾಯ ಸಂಭವಿಸದಂತೆ ಇಟ್ಟುಕೊಂಡಿದ್ದನು. ಈತನಿಗೆ ಉತ್ಕ್ರಮಣ ಕಾಲವು ಸನ್ನಿಹಿತವಾಗುತ್ತಲಿದೆ. ಇವನು ೧೦ ಕೋಟಿ ವರಹಗಳು ಬಾಳತಕ್ಕ ರತ್ನಗಳನ್ನು ಒಂದು ಧರ್ಮಾರ್ಥವಾದ ವೈದ್ಯಶಾಲೆಯನ್ನು ಸ್ಥಾಪಿಸುವುದಕ್ಕಾಗಿ ಕೊಟ್ಟಿರುತ್ತಾನೆ. ಈ ಧರ್ಮವು ಆಚಂದ್ರಾರ್ಕವಾಗಿ ನಡೆಯುವುದಕ್ಕೋಸ್ಕರ, ಈ ಹಣವನ್ನು ರಾಜ್ಯಾಧಿಕಾರಿಗಳಲ್ಲಿ ಒಪ್ಪಿಸಿ-ಅದನ್ನು ಲೋಪವಿಲ್ಲದೆ ನಡೆಯಿಸತಕ್ಕ ಪ್ರಯತ್ನವನ್ನು ಮಾಡಬೇಕೆಂದು, ನನ್ನನ್ನು ಇಲ್ಲಿಗೆ ಕರೆಯಿಸಿಕೊಂಡಿರುವನು. ಈ ವಿಷಯದಲ್ಲಿ ಸರಿಯಾದ ಕಾಗದಗಳನ್ನು ಬರೆಯಿಸಿ ತನಗೆ ನಂಬುಗೆಯುಂಟಾಗುವುದಕ್ಕಾಗಿಯೇ, ಇವನು ಇದುವರೆಗೂ ಪ್ರಾಣಧಾರಣೆಯನ್ನು ಮಾಡಿಕೊಂಡಿರುವಂತೆ ತೋರುತ್ತದೆ. ಇದಕ್ಕೆ ನೀನೂ ಸಹಾಯನಾಗಿರಬೇಕೆಂದು, ನಿನ್ನನ್ನೂ ಇಲ್ಲಿಗೆ ಕರೆಯಿಸಿದೆನು.

ಕೋಶಾಧ್ಯಕ್ಷ—ಇಂಥ ಧರ್ಮಗಳನ್ನು ಮಾಡುವುದಕ್ಕಂತು ನಮಗೆ ಶಕ್ತಿಯಿಲ್ಲ. ಅದು ಹಾಗಿರಲಿ; ಇಂಥ ಧರ್ಮಕಾರ್ಯಗಳಲ್ಲಿ ಸಹಾಯಮಾಡತಕ್ಕ ಸಂದರ್ಭ ದೊರಕಿದುದೇ ನಮ್ಮ ಪುಣ್ಯಪ್ರಭಾವವನ್ನು ತೋರಿಸುವುದು. ಹೀಗಿರುವಲ್ಲಿ, ಈ ಕಾರ್ಯದಲ್ಲಿ ಸಹಾಯಮಾಡುವುದಕ್ಕೆ ಯಾರು ತಾನೆ ಹಿಂಜರಿಯುವರು? ನನ್ನಿಂದ ಆಗಬೇಕಾದ ಕಾರ್ಯವೇನಿದ್ದರೂ ಅದನ್ನು ಅವಶ್ಯವಾಗಿ ಮಾಡುತ್ತೇನೆ.

ಅಷ್ಟರಲ್ಲಿಯೇ, ಯಾಮಿಕಾಧಿಕಾರಿಯೂ ದಂಡಾಧ್ಯಕ್ಷನೂ ಪರಂತಪನೊಡನೆ ಅಲ್ಲಿಗೆ ಬಂದರು. ಅವರು ಈ ವಿಷಯಗಳನ್ನೆಲ್ಲ ಆಮೂಲಾಗ್ರವಾಗಿ ಕೇಳಿ ವಿಸ್ಮಿತರಾಗಿ, ಅವನ ಔದಾರ್ಯಕ್ಕೆ ಮೆಚ್ಚಿ, ತಮ್ಮ ಕೈಲಾದ ಸಹಾಯವನ್ನು ತಾವೂ ಮಾಡುವುದಾಗಿ ಒಪ್ಪಿದರು. ಕೂಡಲೆ ನ್ಯಾಯಾಧಿಪತಿಯು ಈ ಧರ್ಮಕ್ಕೆ ಉಪಯೋಗಿಸತಕ್ಕ ದ್ರವ್ಯಗಳಗಾಗಿ ಒಂದು ಉಯಿಲನ್ನು ಬರೆಯಿಸಿ, ಅದಕ್ಕೆ ಮಾಧವನ ಅನುಮತಿ ಚಿಹ್ನೆಯನ್ನು ಹಾಕಿಸಿ, ಅವನು ಕೊಟ್ಟಿದ್ದ ರತ್ನಗಳನ್ನು ಕೋಶಾಧ್ಯಕ್ಷನ ವಶಕ್ಕೆ ಒಪ್ಪಿಸಿದನು.

**ಮಾಧವ**—ಎಲೈ ಮಹನೀಯರೇ! ಇದುವರೆಗೂ ನಾನು ನನ್ನ ಧರ್ಮ ಸಂಕಲ್ಪವು ನೆರವೇರುವುದೋ ಇಲ್ಲವೋ ಎಂದು ಬಹಳವಾಗಿ ಚಿಂತಿಸುತಿದ್ದೆನು. ತಕ್ಕ ಕಾಲಕ್ಕೆ ನೀವೆಲ್ಲರೂ ಒದಗಿ ನನ್ನನ್ನು ಕೃತಕೃತ್ಯನನ್ನಾಗಿ ಮಾಡಿದ ವಿಷಯದಲ್ಲಿ ನಾನು ಬಹಳ ಕೃತಜ್ಞನಾಗಿರುವೆನು. ನೀವು ಮಾಡಿರುವ ಈ ಉಪಕಾರಕ್ಕೆ ತಕ್ಕ ಪ್ರತಿಫಲವನ್ನು ಭಗವಂತನೇ ನಿಮಗೆ ಉಂಟುಮಾಡುವನೆಂದು ನಂಬಿರುತ್ತೇನೆ. ನನ್ನ ಇತರ ಆಸ್ತಿಗಳಿಗೆಲ್ಲ ಸರಿಯಾದ ವಿನಿಯೋಗವನ್ನು ಮಾಡಿರುತ್ತೇನೆ. ನೀವು ಸ್ಥಾಪಿಸತಕ್ಕ ವೈದ್ಯಶಾಲೆಯಿಂದ ಅನೇಕಸಹಸ್ರ ಜನಗಳಿಗೆ ಅನಂತವಾದ ಕ್ಲೇಶನಿವಾರಣೆಯುಂಟಾಗುವುದು. ಇದರಿಂದುಂಟಾಗುವ ಪುಣ್ಯಕ್ಕೆ ನೀವೂ ಭಾಗಿಗಳಾಗಬೇಕೆಂದು, ನಾನು ಜಗದೀಶ್ವರನನ್ನು ಪ್ರಾರ್ಥಿಸುತ್ತೇನೆ. ಹೀಗೆ ಹೇಳುತ, ಆತ್ಮ ಶುದ್ಧಿಯಿಂದ ದೇವತಾಧ್ಯಾನಮಾಡುತ, ಮಾಧವನು ಸ್ವರ್ಗಸ್ಥನಾದನು.

## ಅಧ್ಯಾಯ ೪.

ಕಲ್ಯಾಣಪುರವು, ಪೂರ್ವಕಾಲದಲ್ಲಿ ಗಂಧರ್ವಪುರಿಯಂತೆಯೇ ಬಹಳ ಪ್ರಸಿದ್ಧವಾದ ರಾಜಧಾನಿಯಾಗಿದ್ದಿತು. ಈ ಪಟ್ಟಣವು ಸಪ್ತಕಕ್ಷ್ಯಗಳಿಂದಕೂಡಿರುವ ಅನೇಕ ಸೌಧಾಗ್ರಗಳಿಂದಲೂ, ಕುಬೇರೈಶ್ವರ್ಯವುಳ್ಳ ದೊಡ್ಡವರ್ತಕರಿಂದಲೂ, ಅಹೋರಾತ್ರಿಯೂ ತಮ್ಮತಮ್ಮ ಬುದ್ಧಿಬಲದಿಂದಲೂದೇಹಶ್ರಮದಿಂದಲೂ ಬಹು ದ್ರವ್ಯವನ್ನಾರ್ಜಿಸುವ ಶಿಲ್ಪಿಗಳಿಂದಲೂ, ಅತ್ಯುನ್ನತವಾದ ಗೋಪುರಗಳಿಂದ ಕೂಡಿದ ದೇವಾಲಯಗಳಿಂದಲೂ, ಧರ್ಮಮಾರ್ಗೈಕ ಪರಾಯಣರಾಗಿ ರಾಜತಂತ್ರಧುರೀಣರಾಗಿರುವ ಅಧಿಕಾರಿಗಳಿಂದಲೂ, ಸಮಸ್ತ ವಿದ್ಯೆಗಳಲ್ಲಿಯೂ ಅದ್ವಿತೀಯರಾದ ವಿದ್ವಜ್ಜನಗಳಿಂದಲೂ, ಅತಿಮನೋಹರವಾಗಿದ್ದಿತು. ಮಾಧವನ ಅಣ್ಣನಾದ ಸುಮಿತ್ರನೂ, ಇವನ ಇನ್ನೊಬ್ಬ

ಸಹೋದರನ ಪುತ್ರನಾದ ಶಂಬರನೂ, ಇವರಲ್ಲಿಯೇ ವಾಸಮಾಡುತಿದ್ದರು.
ಪರಂತಪನು, ಮಾಧವನು ಹೇಳಿದ್ದಮೇರೆಗೆ. ಅವನ ಶವವನ್ನು ಪೆಟ್ಟಿಗೆಯಲ್ಲಿ
ಹಾಕಿ ಭದ್ರಪಡಿಸಿಕೊಂಡು ಬಂದು, ಕಲ್ಯಾಣಪುರವನ್ನು ಸೇರಿದನು. ಅಷ್ಟ
ರಲ್ಲಿಯೇ, ಅಲ್ಲಿ ಅವನನ್ನೇ ನಿರೀಕ್ಷಿಸುತಿದ್ದ ಇವನ ಭೃತ್ಯನಾದ ಮಂಜೀರ
ಕನು ಇದಿರುಗೊಂಡು ಬಂದು, ಇವನನ್ನು ಕರೆದುಕೊಂಡು ಹೋಗಿ. ತಾನು
ಮೊದಲು ಗೊತ್ತುಮಾಡಿದ್ದ ಬಿಡಾರದಲ್ಲಿ ಇಳಿಸಿದನು. ಪರಂತಪನು, ತನ್ನ
ಲ್ಲಿದ್ದ ದ್ರವ್ಯವನ್ನೆಲ್ಲ ರಹಸ್ಯವಾಗಿ ಅಲ್ಲಿಯೇ ಒಂದು ಸ್ಥಳದಲ್ಲಿಟ್ಟು,
ಮಾಧವನ ಶವವನ್ನು ತೆಗೆಸಿಕೊಂಡು ಸುಮಿತ್ರನ ಮನೆಗೆ ಹೋದನು. ಆಗ
ತಾನೆ ಕತ್ತಲೆಯಾಗುತಿದ್ದಿತು. ಆ ಸುಮಿತ್ರನ ಮನೆಯಲ್ಲಿ, ಮಹೋತ್ಸವ
ಸೂಚಕವಾದ ಅನೇಕ ದೀಪಗಳನ್ನು ಹತ್ತಿಸಿದ್ದರು; ಅನೇಕ ಜನಗಳು ರಥಾ
ರೂಢರಾಗಿ ಆ ಸುಮಿತ್ರನ ಮನೆಯ ಬಾಗಿಲಿಗೆ ಬರುತ್ತಿದ್ದರು. ಪರಂತಪನು
ಇದನ್ನೆಲ್ಲ ನೋಡಿ, ಆ ಮಹೋತ್ಸವಕ್ಕೆ ಕಾರಣವೇನೆಂದು ಅಲ್ಲಲ್ಲಿ ವಿಚಾ
ರಿಸಲು, ಆ ರಾತ್ರಿ ಚಂದ್ರಮುಖಿಯನ್ನು ಶಂಬರನಿಗೆ ಕೊಡುವುದಾಗಿ ನಿಶ್ಚಿ
ತಾರ್ಥವಾಗುವುದೆಂದು ತಿಳಿಯಿತು. ಆಗ ಪರಂತಪನು, ಇಂಥ ಮಹೋ
ತ್ಸವಕಾಲದಲ್ಲಿ ಸುಮಿತ್ರನಿಗೆ ಈ ಅಶುಭಸಮಾಚಾರವನ್ನು ಹೇಳಿ ಅವನ
ಮನಸ್ಸನ್ನು ಸಂಕಟಪಡಿಸುವುದು ಸರಿಯಲ್ಲವೆಂದು ತನ್ನ ಮನಸ್ಸಿನಲ್ಲಿ
ನಿಶ್ಚಯಿಸಿಕೊಂಡು, ಹಿಂದಿರುಗಿ ತನ್ನ ಬಿಡಾರಕ್ಕೆ ಹೋದನು. ಆದರೆ, ಇವನು
ಮೊದಲೇ ಗಂಧರ್ವಪುರಿಯಿಂದ-ಮಾಧವನು ಸ್ವರ್ಗಸ್ಥನಾದನೆಂದೂ, ಅವನ
ಶವವನ್ನು ತಾನೇ ತೆಗೆದುಕೊಂಡು ಬರುವುದಾಗಿಯೂ ಸುಮಿತ್ರನಿಗೆ ಬರೆ
ದಿದ್ದ ಲೇಖನವು ಮಾತ್ರ, ಆ ಕಾಲಕ್ಕೆ ಸರಿಯಾಗಿ ಸುಮಿತ್ರನ ಕೈಗೆ ತಲ
ಪಿತು. ಅಷ್ಟರೊಳಗಾಗಿಯೇ, ನಿಶ್ಚಿತಾರ್ಥಮಹೋತ್ಸವಕ್ಕಾಗಿ ಅನೇಕ
ಬಂಧುಮಿತ್ರರು ಬಂದು ಸೇರಿದರು. ಸುಮಿತ್ರನು, ಆಗತಾನೆ ಬಂದಿದ್ದ
ಲೇಖನವನ್ನು ಒಡೆದು ನೋಡಿ, ಕೂಡಲೆ ಸಿಡಿಲಿನಿಂದ ಹೊಡೆಯಲ್ಪಟ್ಟ
ವೃಕ್ಷದಂತೆ ಮೂರ್ಛೆಯಿಂದ ಕೆಳಗೆ ಬಿದ್ದನು ಸಭೆಯಲ್ಲಿದ್ದವರೆಲ್ಲರೂ,
ಕಾರಣತಿಳಿಯದೆ ಸಂಭ್ರಾಂತರಾಗಿ, ಹಾಹಾಕಾರಮಾಡುತಿದ್ದರು ಆಗ
ಆ ಶಂಬರನು, ಬಹಳ ಗಾಬರಿಯಿಂದ ಬಂದು ಆ ಕಾಗದವನ್ನು ಓದಿದನು.
ಇವನಿಗೆ ಆ ಕಾಗದವನ್ನು ನೋಡುವಾಗಲೇ, ಸಂತೋಷದಿಂದ ಮುಖವು ವಿಕ

ಸಿತವಾಗುತ್ತ ಬಂದಿತು. ಆದರೆ, ಆ ಸಂತೋಷವನ್ನು ತೋರ್ಪಡಿಸದೆ ಬಹಳ ದುಃಖವನ್ನಭಿನಯಿಸುತ "ಅಯ್ಯೋ! ಇನ್ನೇನು ಗತಿ! ನಮ್ಮ ಚಿಕ್ಕಪ್ಪನಿಗೆ ಇಂಥ ಅಪಮೃತ್ಯು ಸಂಭವಿಸಿತಲ್ಲಾ! ಹಾ! ಹಾ!" ಎಂದು ನೆಲದಮೇಲೆ ಬಿದ್ದು ಹೊರಳಿಹೊರಳಿ ಗಟ್ಟಿಯಾಗಿ ಅಳುವುದಕ್ಕುಪಕ್ರಮಿಸಿದನು. ಇದನ್ನು ಕೇಳಿದಕೂಡಲೆ, ಚಂದ್ರಮುಖಿಯೂ ಕೂಡ ಅತ್ಯಂತ ಶೋಕಾವೇಗದಿಂದ ಸ್ತಬ್ಧಳಾಗಿ ಸ್ವಲ್ಪಹೊತ್ತಿನಮೇಲೆ ಚೇತರಿಸಿಕೊಂಡು ದುಃಖಿಸುತಿರಲು, ಸುಮಿತ್ರನು ಅವಳನ್ನು ಸಮಾಧಾನಪಡಿಸುತಿದ್ದನು. ಇದನ್ನೆಲ್ಲ ನೋಡಿ, ಅಲ್ಲಿ ಬಂದಿದ್ದ ಜನರೆಲ್ಲರೂ ಸಂತಾಪಪಡುತ್ತ, ಸುಮಿತ್ರನಿಗೆ ದುಃಖೋಪಶಮನಾರ್ಥವಾಗಿ ಹೇಳಬೇಕಾದ ಮಾತುಗಳನ್ನೆಲ್ಲ ಹೇಳಿ, ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಸುಮಿತ್ರನು ಸಹೋದರನ ಗುಣಾತಿಶಯಗಳನ್ನು ಆಗಾಗ್ಗೆ ಸ್ಮರಿಸಿಕೊಂಡು, ಆತನಿಗೆ ಉಂಟಾದ ಅಕಾಲ ಮರಣಕ್ಕಾಗಿ ದುಃಖಿಸುತ್ತ, ಇವನ ಮರಣವಿಷಯಕಗಳಾದ ಪೂರ್ವೋತ್ತರಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂದು, ಪರಂತಪನನ್ನೇ ಇದಿರು ನೋಡುತಿದ್ದನು. ಪರಂತಪನು, ಮಾರನೆಯದಿನ ಸುಮಿತ್ರನ ಬಳಿಗೆ ಹೋಗಿ, ಕಾಮಮೋಹಿನಿಯ ವೃತ್ತಾಂತ ವಿನಾ-ಗಂಧರ್ವಪುರಿಯಲ್ಲಿ ನಡೆದ ಇತರ ವೃತ್ತಾಂತವೆಲ್ಲವನ್ನೂ ಹೇಳಿ, ಮಾಧವನು ಕೊಟ್ಟಿದ್ದ ವಜ್ರದ ಉಂಗುರವನ್ನೂ ತೋರಿಸಿದನು. ಸುಮಿತ್ರನು ಅದನ್ನು ನೋಡಿ, ಅಂತಸ್ತಾಪದಿಂದ ಕಣ್ಣೀರನ್ನು ಸುರಿಯಿಸಿ, "ಅಯ್ಯಾ! ಪರಂತಪ! ನಾನು ಮಾಧವನ ಇಷ್ಟದಂತೆ ನಡೆಯಿಸುವುದಕ್ಕೆ ಯಾವ ಅಡ್ಡಿಯೂ ಇಲ್ಲ. ಆದರೆ, ಈಗ ನಿನ್ನಿಂದ ನನಗೆ ಒಂದು ಉಪಕಾರವಾಗಬೇಕಾಗಿದೆ. ನನಗೆ ಕಾಮಮೋಹಿನಿಯೆಂಬ ಸಾಕುಮಗಳೊಬ್ಬಳಿರುವಳು. ಅವಳನ್ನು ನನ್ನ ತಮ್ಮನ ಮಗನಾದ ಶಂಬರನಿಗೆ ಕೊಟ್ಟು ವಿವಾಹಮಾಡಬೇಕೆಂದಿರುವೆನು. ಈ ಕಾರ್ಯವು ನೆರವೇರುವವರೆಗೂ, ಮಾಧವನು ತನ್ನ ಆಸ್ತಿಯೆಲ್ಲವನ್ನೂ ನಿನಗೆ ಬರೆದಿರುವ ಅಂಶವನ್ನು ಮಾತ್ರ ನೀನು ಹೊರಪಡಿಸಕೂಡದು. ಇಲ್ಲದಿದ್ದರೆ, ಈ ವಿವಾಹಕಾರ್ಯಕ್ಕೆ ವಿಘ್ನವಾಗುವುದು" ಎಂದು ಹೇಳಲು, ಅದಕ್ಕೆ ಪರಂತಪನು "ನಾನಾಗಿ ಈ ಪ್ರಸ್ತಾವವನ್ನು ಎಂದಿಗೂ ಮಾಡತಕ್ಕನಲ್ಲ; ಆದರೆ, ಈ ಮಾಧವನು ತನ್ನ ಆಸ್ತಿಯ ವಿಷಯದಲ್ಲಿ ಹೇಗೆ ವಿನಿಯೋಗ ಮಾಡಿರು

ವನೆಂದು ಯಾರಾದರೂ ಕೇಳಿದರೆ, ನಾನು ಸುಳ್ಳು ಹೇಳುವುದಕ್ಕಾಗುವುದಿಲ್ಲ" ಎಂದು ಹೇಳಿದನು. ಕೂಡಲೆ, ಸುಮಿತ್ರನು ತನ್ನ ಬಂಧು ಮಿತ್ರರೊಡನೆ ಸೇರಿ, ಯಥಾವಿಧಿಯಾಗಿ ಮಾಧವನಿಗೆ ಉತ್ತರಕ್ರಿಯೆಗಳನ್ನು ನಡೆಯಿಸಿ, ಪರಂತಪ ನನ್ನು ತನ್ನ ಸಹೋದರನೊಡನೆ ನಿರ್ವಿಶೇಷವಾಗಿ ನೋಡುತ್ತ ತನ್ನ ಮನೆ ಯಲ್ಲಿಟ್ಟುಗೊಂಡು ಉಪಚರಿಸುತ್ತಿದ್ದನು. ಶಂಬರನೂ ಕಾಮಮೋಹಿನಿಯೂ ಸಹ ಅಲ್ಲಿಯೇ ಇದ್ದರು. ಕ್ರಮಕ್ರಮವಾಗಿ ಪರಂತಪನಿಗೂ ಕಾಮಮೋ ಹಿನಿಗೂ ಪರಸ್ಪರ ಗೌರವವು ಹೆಚ್ಚುತ್ತಿದ್ದಿತು. ಅಲ್ಪಕಾಲದೊಳಗಾಗಿಯೇ ಈ ಗೌರವವು ಸ್ನೇಹರೂಪವಾಗಿ ಪರಿಣಮಿಸಿತು. ಕೊನೆಗೆ ಈ ಸ್ನೇಹವೇ ಇವರಿಬ್ಬರಲ್ಲಿಯೂ ಪರಸ್ಪರಾನುರಾಗ ರೂಪವನ್ನು ಹೊಂದಿತು. ಇವರಿಬ್ಬ ರಲ್ಲಿಯೂ ಶೃಂಗಾರ ಚೇಷ್ಟೆಗಳು ತರಂಗತರಂಗವಾಗಿ ಉದ್ಭವಿಸುತ್ತಿದ್ದುವು. ಹೀಗಿರುವಲ್ಲಿ, ಒಂದು ದಿನ ಪರಂತಪನು ಸಂಧ್ಯಾಕಾಲದಲ್ಲಿ ಸಂಚಾರಾರ್ಥ ವಾಗಿ ಹೋಗಿ ಬರುತ್ತಿರುವಾಗ, ಸುಮಿತ್ರನ ಉಪವನಕ್ಕೆ ಬಂದು ಅಲ್ಲಿ ಪುಷ್ಪಭರಿತಗಳಾದ ಲತೆಗಳ ರಾಮಣೀಯಕವನ್ನು ನೋಡಿ ಆನಂದಿಸುತ್ತಿ ರಲು, ಕಾಮಮೋಹಿನಿಯೂ ಪುಷ್ಪಾಪಚಯ ವ್ಯಾಜದಿಂದ ಅಲ್ಲಿಗೆ ಬಂದಳು.

**ಕಾಮಮೋಹಿನಿ**—ಮಹನೀಯನಾದ ಪರಂತಪನೆ! ನಾನು ನಿನ್ನಲ್ಲಿ ಕೆಲವು ವಿಜ್ಞಾಪನೆಗಳನ್ನು ತಿಳಿಯಿಸಬೇಕೆಂದು ಬಹುದಿವಸಗಳಿಂದ ನಿರೀಕ್ಷಿ ಸುತ್ತಿದ್ದೆನು. ಆದರೆ ದೈವಕೃಪೆಯಿಂದ ಈಗ ಅವಕಾಶ ಸಿಕ್ಕಿರುವುದು. ನೀನು ಹೇಳಿದ ಮಾಧವನ ವೃತ್ತಾಂತವು ನನಗೆ ಬಹುಸಂಕಟಕರವಾಗಿರುವುದು. ಆತನ ಅಕಾಲಮರಣಕ್ಕೆ, ಮಂದಭಾಗ್ಯಳಾದ ನಾನೇ ಮುಖ್ಯಕಾರಣಭೂತ ಳೆಂದು ಹೇಳಬೇಕಾಗಿದೆ. ಹೇಗೆಂದರೆ,-ಅವನು ನನ್ನಲ್ಲಿ ಬಹು ಅನುರಾಗ ವುಳ್ಳವನಾಗಿದ್ದನು. ನನಗೂ ಅವನಲ್ಲಿ ಅನುರಾಗವು ಹೆಚ್ಚುತ್ತಿದ್ದಾಗ್ಯೂ, ಶಂಬರನ ದುರ್ಬೋಧನೆಯಿಂದ ನಾನು ಅವನವಿಷಯದಲ್ಲಿ ಉದಾಸೀನೆಯಾ ದೆನು. ನನ್ನ ಭಾವವನ್ನು ತಿಳಿದಕೂಡಲೆ, ಅವನು ಈ ಪಟ್ಟಣವನ್ನು ಬಿಟ್ಟು ಹೊರಟುಹೋದನು. ಶಂಬರನು ಮಾಧವನ ವಿಷಯದಲ್ಲಿ ಜುಗು ಪ್ಸೆಹುಟ್ಟಿಸಿದ್ದು ನನ್ನ ಮೃತ್ಯುವಿಗೇ ಎಂದು ಈಗ ನಿಜವಾಗಿ ನಂಬಬೇಕಾ ಗಿದೆ. ಈ ನೀಚನೇ ನನ್ನನ್ನು ವಿವಾಹಮಾಡಿಕೊಳ್ಳಬೇಕೆಂದು ಸಂಪೂರ್ಣ ಪ್ರಯತ್ನದಲ್ಲಿದ್ದಾನೆ. ಇದಕ್ಕನುಕೂಲವಾಗಿ, ಸುಮಿತ್ರನೂ ಇವನನ್ನೇ

ವಿವಾಹವಮಾಡಿಕೊಳ್ಳಬೇಕೆಂದು ನನ್ನನ್ನು ಬಲಾತ್ಕರಿಸುತ್ತಲಿದ್ದಾನೆ. ಈ ಶಂಬರನು ಬಹು ದುರಾತ್ಮನು. ಇವನನ್ನು ವರಿಸುವುದಕ್ಕಿಂತ ಮರಣವೇ ಉತ್ತಮವೆಂದು ನಾನು ಭಾವಿಸಿದ್ದೇನೆ. ಈಗಲೂ, ವಿವಾಹಕಾಲಕ್ಕೆ ಸರಿಯಾಗಿ ವಿಷಪಾನವನ್ನು ಮಾಡಿ ಈ ಜೀವವನ್ನು ಕಳೆದುಕೊಳ್ಳಬೇಕೆಂದು, ನಾನು ದೃಢಸಂಕಲ್ಪಳಾಗಿದ್ದೇನೆ. ಶಂಬರನು ಸರ್ವಥಾ ನನಗೆ ಅನುರೂಪನಲ್ಲ. ಆದುದರಿಂದ, ಅದರಲ್ಲಿ ನನಗೆ ಇಷ್ಟವಿಲ್ಲ. ಮಾಧವನು ಸತ್ಯಸಂಧನು ; ಸಕಲ ವಿದ್ಯಾವಿಶಾರದನು; ಧರ್ಮಿಷ್ಠನು; ಗುಣನಿಧಿ. ಇಂಥವನನ್ನು ಬಿಟ್ಟು. ಗುಣಹೀನನಾಗಿಯೂ ನಿರಕ್ಷರಕುಕ್ಷಿಯಾಗಿಯೂ ನೀಚನಾಗಿಯೂ ಇರುವ ಈ ಶಂಬರನನ್ನು ವಿವಾಹಮಾಡಿಕೊಳ್ಳತಕ್ಕ ದುರವಸ್ಥೆ ನನಗೆ ಪ್ರಾಪ್ತವಾಗಿದೆ. ಇವನ್ನು ತಪ್ಪಿಸಿಕೊಳ್ಳುವುದಕ್ಕೆ ಉಪಾಯವೇ ತೋರಲಿಲ್ಲ. ಆದುದರಿಂದ, ಈ ವಿಷಯದಲ್ಲಿ ನೀನೆನಗೆ ಸಹಾಯಮಾಡಿ ಪ್ರಾಣದಾನವನ್ನು ಮಾಡಿದ ಉಪಕಾರಕ್ಕೆ ಭಾಗಿಯಾಗಬೇಕೆಂದು ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತೇನೆ.

ಪರಂತಪ—ಆರ್ಯಳೆ ! ಚಿಂತಿಸಬೇಡ. ನಿನ್ನನ್ನು ಈ ಕಷ್ಟದಿಂದ ಬಿಡಿಸುವ ಭಾರವು ನನ್ನದಾಗಿರಲಿ. ನೀನು ಮಾಧವನ ಗುಣಗಳ ವಿಷಯದಲ್ಲಿ ಹೇಳಿದ್ದೆಲ್ಲ ನಿಜ. ಅಂಥವನು ಲಭಿಸದೆ ಹೋದುದು ನಿನ್ನ ದೌರ್ಭಾಗ್ಯವೇ ಸರಿ. ಸ್ತ್ರೀಯರಿಗೆ ಅಂಥ ಪತಿಗಳು ದೊರೆಯಬೇಕಾದರೆ ಜನ್ಮಾಂತರಗಳಲ್ಲಿ ಬಹು ಸುಕೃತಗಳನ್ನು ಮಾಡಿರಬೇಕು. ಆದರೆ, ಮೀರಿದ ಕೆಲಸಕ್ಕೆ ಎಷ್ಟು ಚಿಂತಿಸಿದರೆತಾನೆ ಏನುಪ್ರಯೋಜನ ? ಮಾಧವನು ಲೋಕಾಂತರವನ್ನೈದಿದನು. ಆತನು ಮಾಡಿದ ಧರ್ಮಕಾರ್ಯಗಳು ಮಾತ್ರ ದಿಗಂತವಿಶ್ರಾಂತಗಳಾಗಿ ನಿಲ್ಲುವುವು. ಆತನು ಪ್ರಾಣೋತ್ಕ್ರಮಣ ಕಾಲದಲ್ಲಿಯೂ ನಿನ್ನ ಗುಣಾತಿಶಯಗಳನ್ನೇ ಸ್ಮರಿಸಿಕೊಂಡು, ನಿನ್ನ ಔದಾಸೀನ್ಯಕ್ಕೆ ಆ ನೀಚನಾದ ಶಂಬರನ ದುರ್ಬೋಧನೆಯೇ ಕಾರಣವೆಂದು ತಿಳಿದು, ನಿನಗೆ ಕೊಡುವುದಕ್ಕಾಗಿ ೫೦ ಲಕ್ಷ ದ್ರವ್ಯಗಳನ್ನು ನನ್ನ ವಶಕ್ಕೆ ಕೊಟ್ಟಿರುವನು. ಆ ದ್ರವ್ಯವನ್ನು ಕೊಡುವೆನು. ಅದರಿಂದ ನೀನು ಪರಾಧೀನಳಾಗದೆ ಸ್ವತಂತ್ರವಾಗಿ ಜೀವಿಸುತ್ತ ಸುಖವಾಗಿರಬಹುದು.

**ಕಾಮಮೋಹಿನಿ**—ನಾನು ನಿರ್ಭಾಗ್ಯಳು. ನನ್ನ ದೌರಾತ್ಮ್ಯಕ್ಕೂ ಔದಾಸೀನ್ಯಕ್ಕೂ ತಕ್ಕ ಫಲವನ್ನು ಈಗ ನಾನು ಅನುಭವಿಸಬೇಕಾಯಿತು. ಇವ

ನಲ್ಲಿ ನಾನು ಮಾಡಿದ ಔದಾಸೀನ್ಯಕ್ಕೆ ಈಗ ಅವನು ತಕ್ಕ ಪ್ರತೀಕಾರವನ್ನು ಮಾಡಿದನು. ಇನ್ನಾವುದಕ್ಕೂ ನಾನು ಅಷ್ಟು ಚಿಂತಿಸಿ ಸಂತಾಪಪಡುವುದಿಲ್ಲ. ಆ ಮಾಧವನು ತನ್ನ ಪ್ರಾಣೋತ್ಕ್ರಮಣಕಾಲದಲ್ಲಿಯೂ ಕೂಡ, ನಿರ್ಘೃಣಳಾಗಿಯೂ ಪಾಪಿನಿಯಾಗಿಯೂ ಇರುವ ನನ್ನನ್ನು ಸ್ಮರಿಸಿಕೊಂಡು, ನಾನು ಅವನಿಗೆ ಮಾಡಿದ ತಿರಸ್ಕಾರವನ್ನು ಮನಸ್ಸಿನಲ್ಲಿಡದೆ, ಈ ದ್ರವ್ಯವನ್ನು ನಿನ್ನಮೂಲಕ ಕಳುಹಿಸಿರುವುದೇ, ನನಗೆ ಮರ್ಮೋದ್ಘಾಟನೆ ಮಾಡಿದಂತೆ ದುಸ್ಸಹವಾದ ಸಂತಾಪವನ್ನುಂಟುಮಾಡುತ್ತಿರುವುದು. ಅಯ್ಯಾ! ಪರಂತಪ! ನನಗೆ ದ್ರವ್ಯದಮೇಲೆ ಸ್ವಲ್ಪವೂ ಅಪೇಕ್ಷೆಯಿಲ್ಲ. ಯಾವ ಸಂಪತ್ತೂ ನನಗೆ ಬೇಕಾಗಿಲ್ಲ. ಆ ದುರಾತ್ಮನಾದ ಶಂಬರನಿಗೆ ಅಧೀನಳಾಗದ ಹಾಗಾದರೆ, ಅದೇ ಸಾಕು. ಸೇವಾವೃತ್ತಿಯಿಂದಲಾದರೂ ಜೀವಿಸುತ್ತ ಕಾಲವನ್ನು ಕಳೆಯುವೆನು. ನನ್ನ ಆಯುಃಪರಿಮಾಣ ಮುಗಿಯುವವರೆಗೂ ಮಾಧವನಿಗೆ ದ್ರೋಹಮಾಡಿದೆನೆಂಬ ಅನುತಾಪವು ನನಗೆ ಹೋಗತಕ್ಕುದಲ್ಲ. ಮಾಧವನು ನನಗೋಸ್ಕರ ಕೊಟ್ಟಿರತಕ್ಕ ದ್ರವ್ಯವನ್ನು ನಿನ್ನ ಶ್ರಮಕ್ಕೆ ಪ್ರತಿಫಲವನ್ನಾಗಿ ಮಾಡಿಕೊಂಡು, ನನಗೆ ಈ ಬಂಧಮೋಚನವನ್ನು ಮಾಡಿದರೆ, ನಾನು ನಿನಗೆ ಮರಣಾಂತವಾಗಿ ಕೃತಜ್ಞಳಾಗಿರುವೆನು.

ಪರಂತಪ—ಪ್ರತಿಫಲವನ್ನಪೇಕ್ಷಿಸದೆ ಪರೋಪಕಾರವನ್ನು ಮಾಡುವುದೇ ಧರ್ಮವು. ಹೀಗಿರುವಲ್ಲಿ, ನಾನು ದ್ರವ್ಯಾರ್ಥಿಯಾಗಿ ಎಂದಿಗೂ ಉಪಕಾರ ಮಾಡತಕ್ಕವನಲ್ಲ. ಮಾಧವನು ಕೊಟ್ಟಿರುವ ದ್ರವ್ಯವು ನಿನ್ನದಾಗಿದೆ. ಈ ದ್ರವ್ಯಸಹಾಯದಿಂದಲೇ ಬಂಧಮೋಚನೆಯನ್ನು ಮಾಡಿಕೊಳ್ಳಬೇಕೆಂಬ ಸಂಕಲ್ಪವು ನಿನಗಿದ್ದರೆ, ಅಂಥ ಧನಾಕಾಂಕ್ಷಿಗಳಾದ ಇತರರು ಯಾರನ್ನಾದರೂ ನೋಡಬಹುದು. ನನ್ನಿಂದಲೇ ಈ ಕಾರ್ಯವಾಗಬೇಕಾಗಿದ್ದರೆ, ನಾನು ಧರ್ಮಾರ್ಥವಾಗಿ ಮಾಡತಕ್ಕವನೇ ಹೊರತು, ಎಂದಿಗೂ ಪ್ರತಿಫಲವನ್ನಪೇಕ್ಷಿಸತಕ್ಕವನಲ್ಲ.

**ಕಾಮಮೋಹಿನಿ**—ಆರ್ಯನೇ! ನನ್ನ ಮಾತುಗಳಿಂದ ನಿನಗೆ ಕ್ರೋಧವುಂಟಾದಂತೆ ತೋರುವುದು. ನನ್ನ ಅಪರಾಧವನ್ನು ಕ್ಷಮಿಸು. ದುಃಖಾತಿಶಯದಿಂದ ನಾನು ಯುಕ್ತಾಯುಕ್ತ ವಿವೇಚನೆಯಿಲ್ಲದೆ ಆಡಿದ ಮಾತಿಗೆ ನೀನು ಕೋಪಿಸಿಕೊಂಡರೆ, ನಿನ್ನ ದಯಾಳುತ್ವವೇನಾಯಿತು? ಅನಾಥಳಾಗಿ ಸಂಕ

ಟಪಡುತ್ತಿರುವ ನನ್ನನ್ನು ಕಾಪಾಡು. ಸುಮಿತ್ರನು ಈ ಸೀಚನಿಗೆ ನನ್ನನ್ನು ಕೊಡುವುದು ನಿಜ. ನಿನ್ನಲ್ಲಿ ನಾನು ಶರಣಾಗತಳಾಗಿರುವೆನು. ಮುಚ್ಚುಮರೆಯೇಕೆ? ನನ್ನ ಅಂತರಂಗವನ್ನು ಹೇಳುವೆನು, ಕೇಳು. ನೀನು ಇಲ್ಲಿಗೆ ಬಂದುದು ಮೊದಲು, ನನಗೆ ನಿನ್ನ ವಿಷಯದಲ್ಲಿ ಅನುರಾಗವೂ ಗೌರವವೂ ದಿನೇದಿನೇ ವೃದ್ಧಿಹೊಂದುತ್ತಿರುವುವು. ಆದುದರಿಂದ, ನೀನು ನನ್ನನ್ನು ವರಿಸಿದ ಪಕ್ಷದಲ್ಲಿ, ನಾನು ಜೀವಿಸಿರುವವರೆಗೂ ಮನೋವಾಕ್ಕಾಯಕರ್ಮಗಳಲ್ಲಿಯೂ ನಿನ್ನ ಇಷ್ಟಾನುವರ್ತಿನಿಯಾಗಿರುವೆನು. ಹೀಗಲ್ಲದೆ ಶಂಬರನನ್ನೇ ವಿವಾಹ ಮಾಡಿಕೊಳ್ಳಬೇಕಾದ ಪಕ್ಷದಲ್ಲಿ, ನಾನು ಆತ್ಮಹತ್ಯೆಮಾಡಿಕೊಳ್ಳುವುದೇ ನಿಜ. ಆದುದರಿಂದ, ನನ್ನ ಕಷ್ಟವನ್ನು ನಿವಾರಣೆಮಾಡಿ ನನ್ನನ್ನು ಬದುಕಿಸುವುದು ನಿನಗೆ ಸೇರಿದೆ. ಇದು ಮೊದಲುಗೊಂಡು ನನ್ನ ಪ್ರಾಣಮಾನಗಳೆರಡಕ್ಕೂ ನೀನೇ ನಿಯಾಮಕನಾಗಿರುತ್ತೀಯೆ.

**ಪರಂತಪ**—ಶರಣಾಗತರಕ್ಷಣೆ ಮಾಡುವುದಕ್ಕಿಂತ ಉತ್ಕೃಷ್ಟವಾದ ಬೇರೆ ಧರ್ಮವಾವುದೂ ಇಲ್ಲ. ನಿನ್ನನ್ನು ಈ ಕಷ್ಟದಿಂದ ಬಿಡಿಸುವೆನು. ಈ ವಿಷಯದಲ್ಲಿ ನನಗೆ ಎಷ್ಟು ವಿಪತ್ತುಗಳು ಪ್ರಾಪ್ತವಾದಾಗ್ಯೂ ಆಗಲಿ. ಆದರೆ, ನಿನ್ನನ್ನು ವಿವಾಹಮಾಡಿಕೊಳ್ಳಬೇಕೆಂಬ ಅಭಿಲಾಷೆಯಿಂದ ನಾನು ಎಂದಿಗೂ, ಈ ಕೆಲಸವನ್ನು ಮಾಡತಕ್ಕವನಲ್ಲ. ಅದು ಹಾಗಿರಲಿ; ಪ್ರಕೃತದಲ್ಲಿ ನಾನು ನಿನ್ನ ಬಂಧನವನ್ನು ಬಿಡಿಸಿ ಕಷ್ಟನಿವಾರಣೆ ಮಾಡುವೆನು. ಅನಂತರದಲ್ಲಿ ನಿನಗೆ ನನಗಿಂತಲೂ ಉತ್ತಮನಾದವನು ಯಾವನಾದರೂ ದೊರೆಯುವನು. ಹಾಗೆ ಯಾರೂ ದೊರೆಯದಪಕ್ಷದಲ್ಲಿ, ಆಗ ಪರ್ಯಾಲೋಚಿಸೋಣ. ಆದರೆ ನನಗೆ ಇನ್ನೊಂದು ಅನುಮಾನವು ಬಾಧಿಸುತ್ತಿರುವುದು. ಏನೆಂದರೆ;-ನೀನು ಶಂಬರನನ್ನು ವಿವಾಹ ಮಾಡಿಕೊಳ್ಳದಿದ್ದ ಪಕ್ಷದಲ್ಲಿ, ಬಾಲ್ಯದಿಂದ ಇದುವರೆಗೂ ನಿನ್ನನ್ನು ನೋಯಿಸದೆ ಸುಖದಿಂದ ಸಾಕುತ್ತಿದ್ದ ಸುಮಿತ್ರನಿಗೆ ಅತ್ಯಂತ ಕ್ಲೇಶವುಂಟಾಗುವುದು. ಆಗ ನೀನು ಕೃತಘ್ನಳೆಂಬ ಭೋಕಾಪವಾದಕ್ಕೆ ಗುರಿಯಾಗಬೇಕಾಗುತ್ತದೆಯಲ್ಲವೆ !

**ಕಾಮಮೋಹಿನಿ**— ಈ ಸುಮಿತ್ರನು ನನಗೆ ಮಹೋಪಕಾರಮಾಡಿದ ತಕ್ಕವನೇ ಅಹುದು. ತಂದೆತಾಯಿಗಳ ಮುಖವನ್ನೇ ಕಾಣದ ನನ್ನನ್ನು ತಂದು ಇದುವರೆಗೂ ಅತಿ ಪ್ರೇಮದಿಂದ ಪೋಷಿಸಿದನು. ಇವನೇ ನನ್ನ ಭಾಗಕ್ಕೆ

ತಾಯಿಯಾಗಿಯೂ ತಂದೆಯಾಗಿಯೂ ಇರುವನು. ಈ ವಿಷಯದಲ್ಲಿ ನಾನು ಎಷ್ಟು ಕೃತಜ್ಞಳಾಗಿದ್ದಾಗ್ಯೂ, ಕಡಮೆಯೇ ಸರಿ. ಜೀವಾವಧಿ ಇವನಲ್ಲಿ ನಾನು ಸೇವೆಮಾಡುತ್ತಿದ್ದಾಗ್ಯೂ, ಇವನು ಮಾಡಿದ ಉಪಕಾರಕ್ಕೆ ಸರಿಯಾದ ಪ್ರತ್ಯುಪಕಾರವಾಗಲಾರದು. ಆದರೆ, ಮಕ್ಕಳಿಗೆ ತಾಯಿತಂದೆಗಳು ಸಮಸ್ತ ವಿಷಯದಲ್ಲಿಯೂ ಯಾಮುಕರಾಗಿದ್ದಾಗ್ಯೂ, ಧರ್ಮಮಾರ್ಗವನ್ನು ಬಿಟ್ಟು ಹೋಗುವುದು ಅವರಿಗೂ ಉಚಿತವಲ್ಲ. ತಾಯಿ ತಂದೆಗಳು ಮಕ್ಕಳನ್ನು ಸಾಕಿದಮಾತ್ರದಿಂದಲೇ, ಯುಕ್ತಾಯುಕ್ತವಿವೇಚನೆಯಿಲ್ಲದೆ ಅವರಿಗೆ ಅನುಚಿತಕಾರ್ಯಗಳನ್ನು ಹೇಳಿ ಅದನ್ನು ಮಾಡದಿದ್ದರೆ ಕೃತಘ್ನರೆಂದು ಹೇಳುವುದಕ್ಕಾದೀತೆ? ಈ ಶಂಬರನು ವ್ಯಭಿಚಾರಿಯು; ಇದರಿಂದ ಅನೇಕ ರೋಗಗಳುಳ್ಳವನಾಗಿರುವನು. ಬಹಳ ಸುಳ್ಳುಗಾರನು, ಚೌರ್ಯ ಮೊದಲಾದ ಅನೇಕ ದುಷ್ಕೃತ್ಯಗಳನ್ನು ಮಾಡಿ, ಅನೇಕಾವೃತ್ತಿ ರಾಜ್ಯಾಧಿಕಾರಿಗಳಿಂದ ಕ್ರೂರ ಶಿಕ್ಷೆಯನ್ನನುಭವಿಸಿರುತ್ತಾನೆ. ಇಂಥವನನ್ನು ವಿವಾಹಮಾಡಿಕೊಳ್ಳಬೇಕೆಂದು ನನ್ನ ತಂದೆ ನಿರ್ಬಂಧಿಸಬಹುದೆ? ಈ ಮಾತನ್ನು ನಾನು ಹೇಗೆ ತಾನೆ ನಡಯಿಸಲಿ! ಈ ವಿಷಯದಲ್ಲಿ ಇಷ್ಟವಿಲ್ಲವೆಂದು ಹೇಳಿದಮಾತ್ರಕ್ಕೇ ನಾನು ಕೃತಘ್ನಳಾಗುವನೆ? ಈ ಸುಮಿತ್ರನು ಮಾಡಿರತಕ್ಕ ಮಹೋಪಕಾರಗಳನ್ನು ನಾನು ಎಂದಿಗೂ ಮರೆಯುತಕ್ಕವಳಲ್ಲ. ನ್ಯಾಯವಾದ ರೀತಿಯಲ್ಲಿ ಹೇಳಿದರೆ, ಅವನಿಗೋಸ್ಕರ ನನ್ನ ಪ್ರಾಣವನ್ನಾದರೂ ಒಪ್ಪಿಸುವುದರಲ್ಲಿ ಸಿದ್ಧಳಾಗಿರುವೆನು; ಆ ನೀಚನಾದ ಶಂಬರನ ಪತ್ನಿಯಾಗಿಮಾತ್ರ, ನಾನು ಎಂದಿಗೂ ಇರಲಾರೆನು.

**ಪರಂತಪ** –ನೀನು ಹೇಳುವ ಮಾತುಗಳು ನನಗೆ ಅತ್ಯಾಶ್ಚರ್ಯಕರಗಳಾಗಿರುವುವು. ಸುಮಿತ್ರನು ಬಹಳ ವಿವೇಕಿಯೆಂದು ಕೇಳಿರುತ್ತೇನೆ. ಇದಲ್ಲದೆ, ನಿನ್ನಲ್ಲಿ ಸಂಪೂರ್ಣವಾದ ವಿಶ್ವಾಸವುಳ್ಳವನೆಂದೂ ತೋರುತ್ತದೆ. ಶಂಬರನು ಅಂಥ ದುರ್ಗುಣವುಳ್ಳವನಾಗಿದ್ದರೆ, ಪ್ರಾಣಪ್ರಾಯಳಾದ ನಿನ್ನನ್ನು ಅತನಿಗೆ ಕೊಟ್ಟು ಮದುವೆಮಾಡಬೇಕೆಂದು ಸುಮಿತ್ರನೆಂದಿಗಾದರೂ ಸಂಕಲ್ಪಮಾಡುತಿದ್ದನೆ! ಆ ವಿಚಾರವು ಹೇಗಾದರೂ ಇರಲಿ. ನಿನ್ನ ಪ್ರಾರ್ಥನೆಯಂತೆ ಶಂಬರನಿಗೆ ನೀನು ಮದುವೆಯಾಗದಿರುವ ಹಾಗೆ ಮಾಡುವ ಭಾರವು ನನ್ನದಾಗಿದೆ. ಇನ್ನು ಚಿಂತಿಸಬೇಡ, ಹೋಗು.

**ಕಾಮಮೋಹಿನಿ**—ನನ್ನ ಪ್ರಾರ್ಥನೆಯು ಇಷ್ಟು ಮಾತ್ರವೇ ಅಲ್ಲ; ನನ್ನನ್ನು ನೀನೇ ವಿವಾಹಮಾಡಿಕೊಳ್ಳಬೇಕೆಂಬುದೂ ಕೂಡ ನನ್ನ ಮುಖ್ಯ ಕೋರಿಕೆಯಾಗಿರುವುದು. ನಿನ್ನ ಮಾತುಗಳಿಂದ, ನನ್ನನ್ನು ವರಿಸುವುದರಲ್ಲಿ ನಿನಗೆ ಸಮ್ಮತಿಯಿಲ್ಲವೆಂದು ತೋರುತ್ತದೆ. ಹಾಗಿದ್ದ ಪಕ್ಷದಲ್ಲಿ, ನಿನ್ನ ಸಹಾಯದಿಂದ ನನಗೆ ಆಗತಕ್ಕ ಉತ್ತರ ಫಲವೇನೂ ತೋರಲಿಲ್ಲ. ನೀನು ಇಲ್ಲಿಗೆ ಬಂದಾರಭ್ಯ, ದೇವರೇ ನಿನ್ನನ್ನು ಇಲ್ಲಿಗೆ ಕರೆದುಕೊಂಡು ಬಂದ ನೆಂದು. ತಂದೆ ತಾಯಿ ಬಂಧು ಬಳಗಗಳೆಲ್ಲರಿಂದಲೂ ಬಿಡಲ್ಪಟ್ಟು ಅನಾಥ ಯಾಗಿದ್ದಾಗ್ಯೂ ನಿನ್ನನ್ನು ನೋಡಿ ನಾನು ಸನಾಥಳೆಂದು ಭಾವಿಸಿದ್ದೆನು. ಈಗ ಶಂಬರನನ್ನು ನಾನು ವರಿಸುವುದರಲ್ಲಿ ಇಷ್ಟಪಡದಿದ್ದರೆ, ನನ್ನ ಸಾಕು ತಂದೆಯಾದ ಸುಮಿತ್ರನಿಗೆ ನನ್ನಲ್ಲಿ ಔದಾಸೀನ್ಯವೂ ಕ್ರೋಧವೂ ಉಂಟಾ ಗುವುವೇ ಹೊರತು ಮತ್ತೆ ಬೇರೆಯಿಲ್ಲ. ಸಾಮಾನ್ಯವಾಗಿ ಸ್ತ್ರೀಯರು ತಮ್ಮ ಅನುರಾಗಕ್ಕೆ ಪಾತ್ರರಾದ ಪುರುಷರಿಗೆ ಸ್ವಾಭಿಪ್ರಾಯವನ್ನು ವ್ಯಕ್ತ ವಾಗಿ ತಿಳಿಯಿಸುವುದೇ ಇಲ್ಲ. ಇಂಥ ಸಂಕೋಚವನ್ನೂ ಲಜ್ಜೆಯನ್ನೂ ಬಿಟ್ಟು, ನಿನ್ನ ಗುಣಾತಿಶಯಗಳಿಗೋಸ್ಕರ ನನ್ನನ್ನು ನಾನಾಗಿ ನಿನಗೆ ಒಪ್ಪಿ ಸಿದೆನು. ಇಂಥ ನನ್ನನ್ನು ನೀನು ತಿರಸ್ಕರಿಸುವ ಪಕ್ಷದಲ್ಲಿ, ನಿನ್ನಿಂದ ನಾನು ಉತ್ತರೋತ್ತರ ವಿಶೇಷವಾದ ಅನರ್ಥಗಳಿಗೆ ಪಾತ್ರಳಾಗಬೇಕೇ ಹೊರತು, ಇತರ ಯಾವ ಪ್ರಯೋಜನವೂ ಆಗಲಾರದು. ಆದುದರಿಂದ, ಇನ್ನೊಂದು ನಿಮಿಷಾ ರ್ಧದಲ್ಲಿ ಆ ಸುಮಿತ್ರ ಶಂಬರರ ಸಂಕಲ್ಪಗಳನ್ನು ಭಗ್ನಮಾಡಿ ನಾನು ಪ್ರಾಣತ್ಯಾಗವನ್ನು ಮಾಡಿಕೊಳ್ಳುವೆನು.

ಎಂದು ಹೇಳಿ, ತನ್ನ ಬಳಿಯಲ್ಲಿಟ್ಟುಕೊಂಡಿದ್ದ ವಿಷವನ್ನು ತೆಗೆದು ಬಾಯಿಗೆ ಹಾಕಿಕೊಂಡಳು. ಆ ಕ್ಷಣದಲ್ಲಿಯೇ, ಪರಂತಪನು ಅವಳ ಗಂಟ ಲನ್ನು ಗಟ್ಟಿಯಾಗಿ ಹಿಡಿದುಕೊಂಡು, ಬಲಾತ್ಕಾರದಿಂದ ಆ ವಿಷವನ್ನು ತೆಗೆದು ಒಂದು ಕಾಗದದಲ್ಲಿ ಸುತ್ತಿ ತನ್ನ ಜೇಬಿನಲ್ಲಿ ಹಾಕಿಕೊಂಡು "ಎಲೌ ಮಂಗ ಳಾಂಗಿಯೇ! ನಿನ್ನ ಸ್ಥೈರ್ಯವೂ ದೃಢಸಂಕಲ್ಪವೂ ನನಗೆ ಅತ್ಯಾಶ್ಚರ್ಯವ ನ್ನುಂಟುಮಾಡಿದುವು. ನಿನ್ನನ್ನು ವರಿಸಕೂಡದೆಂದು ನಾನು ಸಂಕಲ್ಪಿಸಿದವ ನಲ್ಲ; ನಿನಗೆ ಪುರುಷಾಂತರನಲ್ಲಿ ಅನುರಾಗವಿದ್ದ ಪಕ್ಷದಲ್ಲಿ, ಅದಕ್ಕೆ ಪ್ರತಿ ಬಂಧಕನಾದ ಈ ನಿನ್ನ ವಿಪತ್ತನ್ನು ತಪ್ಪಿಸಿ ನಿನ್ನ ಕೋರಿಕೆಯನ್ನು ಸಫಲ

ಗೊಳಿಸಬೇಕೆಂದಿದ್ದೆನು. ನೀನು ಅನ್ಯಾದೃಶವಾದ ಸೌಂದರ್ಯವುಳ್ಳವಳಾಗಿಯೂ ಅದಕ್ಕೆ ತಕ್ಕ ಗುಣಾತಿಶಯವುಳ್ಳವಳಾಗಿಯೂ ಇರುವೆ. ನನಗಿಂತಲೂ ರೂಪವಂತರಾಗಿಯೂ ವಿದ್ಯಾವಂತರಾಗಿಯೂ ಗುಣಾಢ್ಯರಾಗಿಯೂ ಇರತಕ್ಕ ಮಹಾತ್ಮರು. ಲೋಕದಲ್ಲಿ ಎಷ್ಟೋ ಜನರಿರುವರು. ನೀನು ಅಂಥವರನ್ನು ವರಿಸಿ ಸಂತೋಷದಿಂದಿರಬಹುದೆಂದು ನಾನು ಹೀಗೆ ಹೇಳಿದೆನೇ ಹೊರತು. ನೀನು ನನಗೆ ಅನುರೂಪಳಲ್ಲವೆಂಬುದಾಗಿಯೂ, ನಿನಗಿಂತಲೂ ಹೆಚ್ಚಾದ ಬೇರೆ ಸ್ತ್ರೀಯು ನನಗೆ ದೊರಕುತ್ತಾಳೆಂಬ ಅಹಂಕಾರದಿಂದಲೂ ಹೇಳಿದವನಲ್ಲ. ಈಗಲೂ ಈ ವಿಷಯವನ್ನು ಚೆನ್ನಾಗಿ ಪರ್ಯಾಲೋಚಿಸು. ನೀನು ನನ್ನ ಸ್ವಸ್ತ್ರೀಯಾದ ಹೆಂಡತಿಯಾಗಿದ್ದರೆ ಹೇಗೋ ಹಾಗೆಯೇ ನಿನ್ನ ವಿಷಯದಲ್ಲಿ ನಾನು ಮಾಡತಕ್ಕ ಸಹಾಯಗಳನ್ನೆಲ್ಲ ಮಾಡುವೆನು. ಈ ಸುಮಿತ್ರ ಶಂಬರರಿಂದ ಉಂಟಾಗಿರುವ ವಿಪತ್ತನ್ನು ತಪ್ಪಿಸುವೆನು. ತರುವಾಯ, ಪಾಣಿಗ್ರಹಣಾರ್ಥವಾಗಿ ನಿನ್ನನ್ನು ವರಿಸಬೇಕೆಂದು ಬರುವವರೆಲ್ಲರನ್ನೂ ಪರೀಕ್ಷಿಸು. ಅವರಲ್ಲಿ ನನಗಿಂತಲೂ ಉತ್ತಮರಾದವರು ಸಿಕ್ಕದಿದ್ದರೆ ನಾನೇ ನಿನ್ನನ್ನು ವರಿಸುತ್ತೇನೆ. ಈ ವಿಷಯದಲ್ಲಿ ಸಂದೇಹವಿಲ್ಲ. ಇದಕ್ಕಾಗಿ ನಿನಗೆ ಬೇಕಾದ ಪ್ರತಿಜ್ಞೆಗಳನ್ನು ಮಾಡಿಕೊಡುತ್ತೇನೆ. ಇನ್ನು ದುಃಖಿಸಬೇಡ." ಎಂದು ಹೇಳಿದನು.

**ಕಾಮಮೋಹಿನಿ**— ಎಲೈ ಮಹನೀಯನೆ! ವಿವಾಹಕ್ಕೆ ಅನುರಾಗವೇ ಮುಖ್ಯವಾದುದು. ವಿದ್ಯಾವಂತರಾಗಿಯೂ ರೂಪವಂತರಾಗಿಯೂ ಇದ್ದ ಅನೇಕ ಸಹಸ್ರ ಜನರು, ನನ್ನ ವಿಚಾರವನ್ನು ಕೇಳಿ ಇಲ್ಲಿಗೆ ಬಂದು ಸುಮಿತ್ರನನ್ನು ಪ್ರಾರ್ಥಿಸಿದರು. ಅವರಲ್ಲಿ ಯಾರನ್ನೂ ನನ್ನ ಮನಸ್ಸು ಒಡಂಬಡಲಿಲ್ಲ. ಹೀಗಿರುವಲ್ಲಿ, ಶಂಬರನಿಗೆ ನನ್ನನ್ನು ಕೊಟ್ಟು ವಿವಾಹಮಾಡಬೇಕೆಂದು ಸುಮಿತ್ರನು ಪ್ರಯತ್ನಮಾಡಿದನು. ಈತನ ಪ್ರಯತ್ನಕ್ಕೆ ಪ್ರತಿಭಟಿಸುವುದಕ್ಕಿಂತ ದೇಹತ್ಯಾಗವನ್ನು ಮಾಡುವುದೇ ಉತ್ತಮವೆಂದು ನಿಷ್ಕರ್ಷೆ ಮಾಡಿ, ಈ ವಿಷವನ್ನು ತರಿಸಿಕೊಂಡೆನು. ನಿಶ್ಚಿತಾರ್ಥ ಕಾಲದಲ್ಲಿಯೇ ಈ ವಿಷವನ್ನು ತೆಗೆದುಕೊಳ್ಳಬೇಕೆಂದಿದ್ದೆನು. ಮಾಧವನ ಮರಣ ಸಮಾಚಾರ ಬಂದು ಈ ನಿಶ್ಚಿತಾರ್ಥೋತ್ಸವವು ನಿಂತುದುದರಿಂದಲೂ, ಮಾರನೆಯ ದಿವಸವೇ ನಿನ್ನ ದರ್ಶನ ಲಾಭವುಂಟಾಗಿ ಕ್ರಮಕ್ರಮವಾಗಿ ನೀನೇ ನನಗೆ ಅನು

ರೂಪನಾದ ಪತಿಯೆಂದು ಭಾವನೆಯುಂಟಾದುದರಿಂದಲೂ, ನನ್ನಿಂದ ಇದುವರೆಗೆ ದೇಹಧಾರಣೆ ಮಾಡಲ್ಪಟ್ಟಿತು. ನಾನು ಮನೋವಾಕ್ಕಾಯಗಳಿಂದಲೂ ನಿನ್ನನ್ನೇ ವರಿಸಿರುತ್ತೇನೆ. ನಿನಗಿದು ಸಮ್ಮತವಾದರೆ ನನ್ನ ಇಷ್ಟವನ್ನು ನೆರವೇರಿಸು ; ಇಲ್ಲದಿದ್ದರೆ, ಬಲಾತ್ಕಾರದಿಂದ ಕಿತ್ತುಕೊಂಡಿರುವ ನನ್ನ ಶೋಕಪರಿಹಾರಕವಾದ ಈ ಸಿದ್ಧೌಷಧವನ್ನು ಕೊಟ್ಟು ಇಲ್ಲಿಂದ ತೆರಳು.

**ಪರಂತಪ**—ನಿನ್ನ ಸ್ಥೈರ್ಯದಿಂದ ನಾನು ಜಿತನಾದೆನು. ಬಹು ಜನ್ಮಸುಕೃತಗಳಿಂದ ನಿನ್ನಂಥ ಗುಣವತಿಯರು ಲಭ್ಯರಾಗುವರು. ನೀನು ಈ ರೀತಿಯಲ್ಲಿ ನನ್ನನ್ನು ವರಿಸುವುದು ನನ್ನ ಭಾಗ್ಯಪರಿಪಾಕವೇ ಸರಿ. ಆದುದರಿಂದ, ಈ ನಿಮಿಷ ಮೊದಲುಗೊಂಡು ನಾನು ನಿನ್ನ ಆಜ್ಞಾನುವರ್ತಿಯಾಗಿರುವೆನು. ಸುಮಿತ್ರ ಶಂಬರರಿಬ್ಬರಿಂದ ಉಂಟಾಗಿರುವ ಭಯವನ್ನು ಬಿಡು. ಈಗ ನಿನ್ನ ಅಭಿಮತವನ್ನು ಪ್ರದರ್ಶನಮಾಡಿ ಒಂದು ಕಾಗದವನ್ನು ಬರೆದು ಸುಮಿತ್ರನಿಗೆ ಕಳುಹಿಸಿ, ಈ ಪಟ್ಟಣದಲ್ಲಿ ನಿನಗೆ ಮಿತ್ರರಾದವರು ಯಾರಾದರೂ ಇದ್ದರೆ ಅವರ ಮನೆಯಲ್ಲಿ ಸ್ವಲ್ಪಕಾಲ ಅಜ್ಞಾತವಾಸ ಮಾಡಿಕೊಂಡಿರು. ನನಗೆ ಸುಮಿತ್ರನಿಂದ ಆಗಬೇಕಾದ ಕೆಲಸಗಳು ಕೆಲವಿವೆ. ಅವುಗಳನ್ನು ಪೂರಯಿಸಿಕೊಂಡು, ನಾನು ನಿನ್ನ ವಿವಾಹಾರ್ಥವಾಗಿ ಬರುವೆನು.

**ಕಾಮಮೋಹಿನಿ**—ಎಲೈ ಪೂಜ್ಯನೆ ! ಅರ್ಕಕೀರ್ತಿಯೆಂಬ ನನ್ನ ಸ್ನೇಹಿತೆಯೊಬ್ಬಳು ಈ ಪಟ್ಟಣದಲ್ಲಿರುವಳು. ಆಕೆಗೆ ವೃದ್ಧರಾದ ತಂದೆ ತಾಯಿಗಳಿರುವರು. ಇವರು ಬಹಳ ಬಡವರು. ಇವರ ಮನೆಯಲ್ಲಿ ಅಜ್ಞಾತವಾಸ ಮಾಡುವುದು ಸುಲಭವೆಂದು ತೋರುತ್ತದೆ. ಅದು ಹಾಗಿರಲಿ : ಸುಮಿತ್ರನ ಮನೆಯಲ್ಲಿ ನಿನಗೇನು ಕೆಲಸ ? ಅಲ್ಲಿದ್ದರೆ ನಿನಗೆ ಬಹು ವಿಪತ್ತುಗಳಿಗೆ ಅವಕಾಶವಾಗಬಹುದು. ನಾನು ನಿನ್ನ ಸಂಗಡ ಮಾತನಾಡುತಿದ್ದಾಗಲೆಲ್ಲ, ಶಂಬರನು ಬಹು ಸಂತಾಪಪಡುತ್ತ, ನಿನ್ನ ಮೇಲೆ ವಿಷವನ್ನು ಕಾರುತಿದ್ದನು. ನನ್ನ ಅಭಿಪ್ರಾಯವು ಅವನಿಗೆ ತಿಳಿದಕೂಡಲೆ, ನೀನು ಆ ಮನೆಯಲ್ಲಿದ್ದ ಪಕ್ಷದಲ್ಲಿ, ನಿನಗೆ ಅಪ್ರತೀಕಾರವಾದ ವಿಪತ್ತನ್ನು ಅವನುಂಟುಮಾಡಬಹುದು. ಆದುದರಿಂದ, ನನ್ನ ಈ ಅಭಿಪ್ರಾಯವು ಶಂಬರ ಸುಮಿತ್ರರಿಗೆ ತಿಳಿಯುವುದಕ್ಕೆ ಮುಂಚಿತವಾಗಿಯೇ ನಿನ್ನ ಕಾರ್ಯಗ

ಳನ್ನು ಸಾಧಿಸಿಕೊಂಡು ಅವನು ಮಾಡುವ ಅನರ್ಥಪ್ರಯೋಗಗಳಿಗೆ ಗುರಿಯಾಗದಿರಬೇಕು.

**ಪರಂತಪ**—(ಸಾವಿರ ಪೌನುಗಳ ನೋಟನ್ನು ಕೊಟ್ಟು) ಈ ದ್ರವ್ಯವನ್ನು ಆರ್ಯಕೀರ್ತಿಯ ತಂದೆಗೆ ಕೊಡು. ಶೀಘ್ರವಾಗಿ ನಾನು ಬಂದು ಆತನಿಗೆ ಇನ್ನೂ ವಿಶೇಷವಾದ ಬಹುಮಾನಗಳನ್ನು ಮಾಡುವೆನು. ಶಂಬರ ಸುಮಿತ್ರರುಗಳಿಂದ ನಿನಗೆ ಯಾವ ಭಯ ಬಂದಾಗ್ಯೂ, ಅದನ್ನು ನಾನು ನಿಗ್ರಹಿಸಬಲ್ಲೆನು. ಮಾಧವನು ತನ್ನ ಆಸ್ತಿಯನ್ನೆಲ್ಲ ನನ್ನ ಹೆಸರಿಗೆ **ಉಯಿಲ್ ಬರೆದು** ಕಾಲಾಧೀನನಾದನು. ಈ ಆಸ್ತಿಯನ್ನೆಲ್ಲ ಸ್ವಾಧೀನಪಡಿಸಿಕೊಂಡು ಬರುತ್ತೇನೆ. ಕೂಡಲೆ ವಿವಾಹಪ್ರಯತ್ನವನ್ನು ಮಾಡೋಣ.

**ಕಾಮಮೋಹಿನಿ** – ಎಲೈ ಪರಂತಪನೆ! ನಿನ್ನ ಮಾತುಗಳು ಬಹಳ ಭಯವನ್ನುಂಟುಮಾಡುತ್ತವೆ. ಮಾಧವನ ಐಶ್ವರ್ಯವು ಕುಬೇರನ ಐಶ್ವರ್ಯಕ್ಕೆ ಸಮಾನವಾದುದು. ಲೋಕದಲ್ಲಿ ಸಂಪತ್ತುಗಳು ವಿಪತ್ತುಗಳೊಡನೆ ಸೇರಿರುವುವು. ಶಂಬರನು ಮಾಧವನ ಆಸ್ತಿಗೆಲ್ಲ ತಾನೇ ಹಕ್ಕುದಾರನೆಂದು ತಿಳಿದುಕೊಂಡಿದ್ದಾನೆ. ಸುಮಿತ್ರನು ಇವನ ಪಕ್ಷವಾಗಿದ್ದಾನೆ. ಈ ದ್ರವ್ಯಕ್ಕೆ ನೀನು ಆಶೆಪಟ್ಟರೆ, ದುಸ್ಸಹವಾದ ಕಷ್ಟಕ್ಕೆ ಗುರಿಯಾಗುವೆ. ನಮಗೆ ದ್ರವ್ಯದ ಮೇಲಿನ ಆಶೆ ಬೇಡ. ಐಶ್ವರ್ಯಗಳು ಹೆಚ್ಚಿದಹಾಗೆಲ್ಲ ತಾಪತ್ರಯಗಳು ಹೆಚ್ಚುವುವು. ಐಶ್ವರ್ಯವಂತರಾಗಿರುವುದಕ್ಕಿಂತ, ದೇಹಶ್ರಮದಿಂದಲೂ ಬುದ್ಧಿಚಾತುರ್ಯದಿಂದಲೂ ಧರ್ಮಲೋಪವಿಲ್ಲದೆ ದೊರೆತಷ್ಟು ಸಂಪಾದಿಸಿಕೊಂಡು ಬಡವರಂತೆ ಜೀವಿಸಿಕೊಂಡಿರುವುದುತ್ತಮ. ಈ ಸಂಪತ್ತನ್ನೆಲ್ಲ ಶಂಬರನಿಗೆ ಬಿಟ್ಟುಬಿಡು. ಈ ಸಂಪತ್ತಿನಿಂದ ಉಂಟಾಗತಕ್ಕ ಸೌಖ್ಯಕ್ಕಿಂತ ಹೆಚ್ಚಾದ ಸೌಖ್ಯವನ್ನು ನಾನು ನಿನಗೆ ಉಂಟುಮಾಡುವೆನು.

**ಪರಂತಪ**—ಈ ವುಯಿಲಿನ ಸಮಾಚಾರವನ್ನು ನಾನು ಸುಮಿತ್ರನಿಗೆ ಹೇಳಿದೆನು. ಆತನು ಈ ಆಸ್ತಿಯನ್ನೆಲ್ಲ ನನ್ನ ವಶ ಮಾಡುವುದಕ್ಕೆ ಒಪ್ಪಿಕೊಂಡಿದ್ದಾನೆ. ಶಂಬರನಿಂದ ನನಗೆ ಯಾವ ಭಯವೂ ಇಲ್ಲ. ಈ ಸಂಪತ್ತುಗಳನ್ನು ಸಾಧಿಸುವೆನು. ಹೀಗೆ ಸಾಧಿಸುವುದು, ದ್ರವ್ಯದ ಮೇಲಣ ಆಶೆಯಿಂದಲ್ಲ; ಮಾಧವನು ಉತ್ಕ್ರಮಣಕಾಲದಲ್ಲಿ ನನ್ನಿಂದ ಮಾಡಿಸಿಕೊಂಡಿರುವ ಕೆಲವು ಪ್ರತಿಜ್ಞೆಗಳಿಗೋಸ್ಕರ ಈ ಕೆಲಸವನ್ನು ಮಾಡಬೇ

ಕಾಗಿದೆ. ಈ ವಿಷಯದಲ್ಲಿ ಯಾವ ಅಪಾಯವೂ ಬರದಂತೆ ನೋಡಿಕೊಳ್ಳುತ್ತೇನೆ. ನೀನು ಯಾವುದಕ್ಕೂ ಭಯಪಡದೆ ಅಜ್ಞಾತವಾಸವನ್ನು ಮಾಡುತ್ತಿರು. ಸುಮಿತ್ರನು ಬರತಕ್ಕ ವೇಳೆಯಾಯಿತು. ಸಲ್ಲಾಪಕ್ಕೆ ವಿಶೇಷ ಕಾಲವಿಲ್ಲ. ನೀನು ಜಾಗ್ರತೆಯಾಗಿ ನಿನ್ನ ಆಪ್ತ ಸ್ನೇಹಿತಳ ಮನೆಯನ್ನು ಸೇರು.

**ಕಾಮಮೋಹಿನಿ**--ನಿನ್ನ ಆಜ್ಞೆಯಂತೆ ನಡೆಯುವೆನು. ದೇವರು ನಿನಗೆ ಏನೂ ವಿಪತ್ತು ಬರದಂತೆ ಕಾಪಾಡಲಿ.

ಎಂದು ಹೇಳಿ, ಕಾಮಮೋಹಿನಿಯು ಯಾರಿಗೂ ತಿಳಿಯದಂತೆ ಆರ್ಯಕೀರ್ತಿಯ ಮನೆಗೆ ಹೊರಟುಹೋದಳು. ಪರಂತಪನೂ ಸುಮಿತ್ರನ ಮನೆಗೆ ಹೊರಟುಹೋದನು.

## ಅಧ್ಯಾಯ ೬.

ಈ ರೀತಿಯಲ್ಲಿ ಕಾಮಮೋಹಿನಿಯು ಸಾಕುತಂದೆಯ ಮನೆಯನ್ನು ಬಿಟ್ಟು ಹೊರಟುಹೋದ ದಿನವೇ, ಶಂಬರನಿಗೆ ಇವಳನ್ನು ಕೊಟ್ಟು ವಿವಾಹಮಾಡುವುದಾಗಿ ನಿಶ್ಚಿತಾರ್ಥವನ್ನು ಗೊತ್ತುಮಾಡಿ, ಅನೇಕ ಬಂಧುಮಿತ್ರರುಗಳಿಗೆ ಲಗ್ನಪತ್ರಿಕೆಗಳು ಕಳುಹಿಸಲ್ಪಟ್ಟಿದ್ದುವು. ಇವಳು ಹೊರಟುಹೋದ ಸ್ವಲ್ಪ ಹೊತ್ತಿನೊಳಗಾಗಿ, ಈ ಶುಭಕಾರ್ಯಕ್ಕೋಸ್ಕರ ಕರೆಯಲ್ಪಟ್ಟಿದ್ದ ಜನಗಳು ಒಬ್ಬೊಬ್ಬರಾಗಿ ಬರುವದಕ್ಕುಪಕ್ರಮವಾಯಿತು.

ಪರಂತಪನು, ಹೀಗೆ ಬರುವ ಅತಿಥಿಗಳನ್ನು ಎದುರ್ಗೊಳ್ಳುತ್ತ ಅವರೊಡನೆ ಮಾತನಾಡುತ್ತಿದ್ದನು. ಆಗತಾನೆ ಒಬ್ಬ ಜವಾನನು ಎರಡು ಕಾಗದಗಳನ್ನು ತಂದು ಸುಮಿತ್ರನ ಜವಾನನ ಕೈಯಲ್ಲಿ ಕೊಟ್ಟು ಹೊರಟುಹೋದನು. ಪರಂತಪನು, ಆ ಮೇಲುವಿಲಾಸಗಳನ್ನು ದೂರದಿಂದಲೇ ನೋಡಿ "ಇವು ಕಾಮಮೋಹಿನಿಯ ಕಾಗದಗಳು; ಇವುಗಳನ್ನು ನೋಡಿದ

ಕೂಡಲೆ, ಸುಮಿತ್ರ ಶಂಬರರಿಗೆ ಅನಿರ್ವಾಚನೀಯವಾದ ಖೇದವುಂಟಾಗುವದಲ್ಲದೆ, ಇವರಿಗೆ ನನ್ನ ಮೇಲೂ ದ್ವೇಷವುಂಟಾಗಬಹುದು ; ಈ ದ್ವೇಷವನ್ನು ತಪ್ಪಿಸಿಕೊಳ್ಳಬೇಕೆಂದು, ಕಾಮಮೋಹಿನಿಗೆ ಪಿತೃಭಕ್ತಿಯ ವಿಷಯದಲ್ಲಿಯೂ, ಕತಜ್ಞತೆಯ ವಿಷಯದಲ್ಲಿಯೂ ಶಂಬರನನ್ನು ವಿವಾಹ ಮಾಡಿಕೊಳ್ಳತಕ್ಕ ವಿಷಯದಲ್ಲಿಯೂ, ಕೂಡಿದ ಮಟ್ಟಿಗೂ ಹೇಳಿದೆನು ; ಅವಳು ಕೇಳಲಿಲ್ಲ. ಇವರ ದ್ವೇಷವು ಪ್ರಬಲವಾಗಿ, ನನ್ನ ಬಳಿಯಲ್ಲಿರತಕ್ಕ ಮಾಧವನ ಉಯಿಲು, ಉಂಗರ, ಕಾಗದಪತ್ರಗಳು, ದ್ರವ್ಯ ಮೊದಲಾದುವುಗಳಿಗೆ ಏನಾದರೂ ಅಪೋಹಬಂದರೆ ಕಷ್ಟ ; ಅದಲ್ಲದೆ, ಅಪರಾಧಿಗಳನ್ನು ಪತ್ತೆಮಾಡುವ ವಿಷಯದಲ್ಲಿ ನನಗೆ ಪೂರ್ಣಾಧಿಕಾರವನ್ನು ಕೊಟ್ಟು ಸರಕಾರದವರು ಕೊಟ್ಟರತಕ್ಕ ಸನ್ನದೂ ನನ್ನ ಬಳಿಯಲ್ಲಿಯೇ ಇದೆ. ಈಗ ಇದನ್ನು ಭದ್ರಪಡಿಸದಿದ್ದರೆ ಬಹಳ ಅನರ್ಥಕ್ಕೆ ಕಾರಣವಾಗುವುದು '' ಎಂದು ಯೋಚಿಸಿ, ಆ ಕ್ಷಣದಲ್ಲೇ ಅವುಗಳನ್ನು ತೆಗೆದುಕೊಂಡು ಯಾರಿಗೂ ತಿಳಿಯದಂತೆ ಆ ತೋಟದಲ್ಲಿ ಗಹನವಾದ ಒಂದು ಪ್ರದೇಶಕ್ಕೆ ಹೋಗಿ, ಅಲ್ಲಿ ಒಂದು ಬಂಡೆಯ ಬಳಿಯಲ್ಲಿ ಒಂದು ಹಳ್ಳವನ್ನು ತೆಗೆದು, ಆ ಗುಂಡಿಯಲ್ಲಿ ಇವುಗಳೆಲ್ಲ ಇಡಲ್ಪಟ್ಟಿದ್ದ ಒಂದು ತವರದ ಪೆಟ್ಟಿಗೆಯನ್ನು ಇಟ್ಟು ಮಣ್ಣುಮುಚ್ಚಿ, ಗುಮಾನಿಗೆ ಆಸ್ಪದವಾಗದಂತೆ ಹೆಪ್ಪುಗಳನ್ನು ಕಟ್ಟಿ, ದಂಸು ಮಾಡಿ ಹೊರಟುಹೋಗಿ, ಅಲ್ಲಿದ್ದ ಅತಿಥಿಗಳ ಜತೆಯಲ್ಲಿ ಸೇರಿಕೊಂಡನು.

ಹೀಗಿರುವಲ್ಲಿ, ಸುಮಿತ್ರನ ಜವಾನನು ಆ ಯೆರಡುಕಾಗದಗಳನ್ನು ತೆಗೆದುಕೊಂಡು ಹೋಗಿ ತನ್ನ ಯಜಮಾನನಿಗೆ ಕೊಟ್ಟನು. ಸುಮಿತ್ರನು ಈ ಕಾಗದಗಳ ಮೇಲುವಿಲಾಸಗಳನ್ನು ನೋಡಿದ ಕೂಡಲೆ ಗಾಬರಿಬಿದ್ದು, ಕವರುಗಳನ್ನು ಕೂಡಲೇ ಒಡೆದು ನೋಡಿದನು. ಅದರಲ್ಲಿ ಬರೆದಿದ್ದ ಬಕ್ಕಣೆ ಯೇನೆಂದರೆ:—

ತೀರ್ಥರೂಪು ಸುಮಿತ್ರರವರ ಚರಣ ಸನ್ನಿಧಾನಗಳಲ್ಲಿ:—

ಸೇವಕಳಾದ ಕಾಮಮೋಹಿನಿಯ ಸಾಷ್ಟಾಂಗ ನಮಸ್ಕಾರಪೂರ್ವಕ ವಿಜ್ಞಾಪನೆಗಳು ; ಕ್ಷೇಮೋಪರಿ, ಸಂಪ್ರತಿ.

ನಾನು ನನ್ನ ಮಾತಾಪಿತೃಗಳನ್ನು ಅರಿಯೆನು. ನನಗೆ ಬುದ್ಧಿಬಂದುದು ಮೊದಲು ತಾವೇ ತಂದೆತಾಯಿಗಳೆಂದು ಭಾವಿಸಿದ್ದೇನೆ. ಬಾಲ್ಯ

ಮೊದಲುಗೊಂಡು, ನನ್ನನ್ನು ಸ್ವಂತ ಮಗಳಲ್ಲಿರತಕ್ಕ ಪ್ರೇಮಕ್ಕಿಂತಲೂ ಹೆಚ್ಚಾದ ಪ್ರೇಮದಿಂದ ಸಾಕಿ, ನನಗೆ ವಿದ್ಯೆ ಬುದ್ಧಿಗಳನ್ನು ಕಲಿಯಿಸಿದಿರಿ, ಇದಕ್ಕೆ ನಾನು ಎಷ್ಟು ಕೃತಜ್ಞಳಾಗಿದ್ದರೂ ಸಾಲದು; ಇದಕ್ಕಾಗಿ ನಾನು ಪ್ರಾಣವನ್ನು ಒಪ್ಪಿಸುವುದರಿಂದಲಾದರೂ ನನ್ನ ಕೃತಜ್ಞತೆಯನ್ನು ತೋರಿಸುವುದಕ್ಕೆ ಸಿದ್ಧಳಾಗಿರುವೆನು. ಆದರೆ, ಈ ದಿನ ನನ್ನನ್ನು ಬಲಾತ್ಕಾರವಾಗಿ ಶಂಬರನಿಗೆ ಕೊಟ್ಟು ವಿವಾಹಮಹೋತ್ಸವವನ್ನು ನಡೆಸುವುದಾಗಿ ನಿಷ್ಕರ್ಷೆಮಾಡಿ, ಇದಕ್ಕಾಗಿ ಅತಿಥಿಗಳನ್ನು ಕರೆಯಿಸುವ ಪ್ರಯತ್ನದಲ್ಲಿದ್ದಿರಿ. ಮೊದಲಿನಿಂದ ಈತನ ವಿಷಯದಲ್ಲಿ ನನಗಿರತಕ್ಕ ಅಭಿಪ್ರಾಯವನ್ನು ನಾನು ಧಾರಾಳವಾಗಿ ತಮಗೆ ತಿಳಯಿಸಿಯೇ ಇದ್ದೇನೆ. ಈತನ ಶೀಲಸ್ವಭಾವಗಳೂ ಗುಣಾತಿಶಯಗಳೂ ತಮಗೆ ತಿಳಿಯದವುಗಳಾಗಿಲ್ಲ. ಈತನನ್ನು ವಿವಾಹಮಾಡಿಕೊಂಡು-ಜೀವಿಸಿರುವವರೆಗೂ ದುಸ್ಸಹವಾದ ವ್ಯಥೆಯನ್ನು ಅನುಭವಿಸುವುದಕ್ಕಿಂತ ಈಗಲೇ ಪ್ರಾಣಹತ್ಯವನ್ನು ಮಾಡಿಕೊಳ್ಳುವುದುತ್ತಮವೆಂದು ಸಂಕಲ್ಪಿಸಿದ್ದೇನೆ. ಈತನಿಗೆ ಕೊಟ್ಟು ವಿವಾಹಮಾಡುವುದಕ್ಕಿಂತಲೂ, ಈ ದೇಹವನ್ನು ಬಿಡೆಂದು ತಾವು ಆಜ್ಞಾಪಿಸಿದ್ದರೆ, ಬಹಳ ಸಂತೋಷದಿಂದ ತಮ್ಮ ಆಜ್ಞೆಯನ್ನು ಶಿರಸಾ ವಹಿಸುತ್ತಿದ್ದೆನು. ತಾವು ಮಾಡತಕ್ಕ ಬಲಾತ್ಕಾರವನ್ನು ನೋಡಿದರೆ, ನನಗೆ ಬಹಳ ಸಂಕಟವಾಗುತ್ತದೆ. ತಮ್ಮ ಪ್ರಯತ್ನವನ್ನು ತಮ್ಮ ಮನಸ್ಸಿನಲ್ಲಿಯೇ ಯೋಚಿಸಬೇಕು. ನನ್ನನ್ನು ತಮ್ಮ ಮಗಳಗಿಂತಲೂ ಹೆಚ್ಚಾಗಿ ಸಾಕಿದಿರಿ. ನನಗೆ ಸರ್ವವಿಷಯದಲ್ಲಿಯೂ ಅನುರೂಪನಾದ ವರನಿಗೆ ಕೊಟ್ಟು ವಿವಾಹಮಾಡುವುದು ತಮ್ಮ ಕರ್ತವ್ಯವಲ್ಲವೆ? ಸರ್ವವಿಧದಲ್ಲಿಯೂ ನನಗೆ ಅನನುರೂಪನಾದವನಿಗೆ ನನ್ನ ಇಷ್ಟಕ್ಕೆ ವಿರೋಧವಾಗಿ ಬಲಾತ್ಕಾರದಿಂದ ನನ್ನನ್ನು ಕೊಟ್ಟು ವಿವಾಹಮಾಡಬೇಕೆಂಬ ಸಂಕಲ್ಪವು ತಮಗೆ ಉಂಟಾಗಬಹುದೆ? ಈ ತಮ್ಮ ಪ್ರಯತ್ನವು ನನಗೆಮಾತ್ರವೇ ಅನಭಿಮತವಾದುದಲ್ಲ; ನನ್ನನ್ನೂ ಶಂಬರನನ್ನೂ ನೋಡಿರತಕ್ಕ ಸರ್ವರಿಗೂ ಇದು ಅನಭಿಮತವಾಗಿದೆ. ಇದಲ್ಲದೆ, ಮೊದಲು ನೀವು ಈ ನಿಶ್ಚಿತಾರ್ಥವನ್ನು ಮಾಡಿದ ದಿವಸವೇ ಮಾಧವನು ಸ್ವರ್ಗಸ್ಥನಾದ ವರ್ತಮಾನವು ತಮಗೆ ಶ್ರುತವಾಗಿ ಈ ಉತ್ಸವಕ್ಕೆ ಭಂಗವಾದುದರಿಂದ, ಈ ಸಂಬಂಧವು ದೇವರಿಗೂ ಅಭಿಮತವಲ್ಲವೆಂದು ಗೊತ್ತಾಗುತ್ತದೆ. ಇಂಥ

ಪ್ರಯತ್ನವನ್ನು ತಾವು ಮಾಡಿದ್ದರಿಂದ, ಅದರ ಫಲವನ್ನು ಅನುಭವಿಸುವುದಕ್ಕೆ ಇಷ್ಟವಿಲ್ಲದೆ, ನಾನು ತಮ್ಮ ಮನೆಯನ್ನು ಬಿಟ್ಟು ಹೊರಟುಹೋಗಿದ್ದೇನೆ. ಈ ವಿವಾಹವೊಂದು ವಿನಾ, ನನಗೆ ಏನು ಆಜ್ಞೆಮಾಡಿದಾಗ್ಯೂ, ನಾನು ಶಿರಸಾ ವಹಿಸಿ ನಡೆದುಕೊಳ್ಳಲು ಸಿದ್ಧಳಾಗಿರುತ್ತೇನೆ. ನನ್ನ ಅಪರಾಧವನ್ನು ಕ್ಷಮಿಸಬೇಕು. ತಮ್ಮ ವಿಧೇಯಳಾದ

**ಕಾಮಮೋಹಿನಿ.**

ಈ ಕಾಗದವನ್ನು ಓದಿದಕೂಡಲೆ, ಸುಮಿತ್ರನು ವಿಸ್ಮಿತನಾಗಿ ಅತ್ಯಂತ ಸಂತಾಪಪರವಶನಾಗಿ "ಕರೆಯಲ್ಪಟ್ಟ ಬಂಧುಮಿತ್ರರೆದುರಿಗೆ ದುಸ್ಸಹವಾದ ಅಪಮಾನವುಂಟಾಯಿತಲ್ಲ!" ಎಂದು ಸಂತಪಿಸುತ್ತ, ಧಡೀಲನೆ ಎದ್ದು ಕಾಮಮೋಹಿನಿಯ ಕೊಠಡಿಗೆ ಹೋಗಿ, ಅವಳು ಅಲ್ಲಿ ಇಲ್ಲದಿದ್ದದ್ದರಿಂದ ಮನೆಯಲ್ಲ ಹುಡುಕಿ ಎಲ್ಲಿಯೂ ಕಾಣದೆ, ತನ್ನ ಉಪವನವನ್ನೆಲ್ಲ ತಿರುಗಿ, ಅಲ್ಲಿಯೂ ಕಾಣದೆಹೋದುದರಿಂದ, ಪರಂತಪನೇನಾದರೂ ಇವಳನ್ನು ಅಪಹರಿಸಿಕೊಂಡು ಹೋದನೇ ಎಂಬ ಗುಮಾನಿಯಿಂದ, ಆತನನ್ನು ನೋಡುವುದಕ್ಕೋಸ್ಕರ ಪುನಃ ಮನೆಗೆ ಹಿಂದಿರುಗಿದನು. ಆಗ ಪರಂತಪನು ಅಲ್ಲಿದ್ದ ಅತಿಥಿಗಳೊಡನೆ ಸಲ್ಲಾಪಮಾಡುತಿದ್ದುದನ್ನು ನೋಡಿ, ತಾನು ಮಾಡಿದ ಊಹೆಯು ಅಸಂಭಾವಿತವೆಂದೆಣಿಸಿಕೊಂಡು, ಅತ್ಯಂತ ವ್ಯಸನದಿಂದ, ಶಂಬರನ ಕೊಠಡಿಗೆ ಹೋಗಿ, ನಿಶ್ಚಿತಾರ್ಥಕ್ಕೋಸ್ಕರ ಅಲಂಕರಿಸಿಕೊಂಡಿದ್ದ ಅವನ ಕೈಗೆ ಆ ಕಾಗದವನ್ನು ಕೊಟ್ಟು, ಮೌನದಿಂದ ತಲೆಬೊಗ್ಗಿಸಿಕೊಂಡು ನಿಶ್ಚಲವಾಗಿ ನಿಂತಿದ್ದನು. ಶಂಬರನು ಇವನ ಮುಖಭಾವದಿಂದ ಸ್ವಲ್ಪ ಗಾಬರಿಪಟ್ಟು, ತನ್ನ ಹೆಸರಿನ ವಿಲಾಸವಿದ್ದ ಆ ಕಾಗದವನ್ನು ಒಡೆದು ನೋಡಿ ಓದಿದನು. ಅದರಲ್ಲಿದ್ದ ಒಕ್ಕಣೆಯೇನೆಂದರೆ:—

ಸಹೋದರನಿಗೆ ಸಮಾನನಾದ ಶಂಬರನಿಗೆ,

ಕಾಮಮೋಹಿನಿಯ ವಿಜ್ಞಾಪನೆಗಳು.

ನಿನ್ನ ಶೀಲಸ್ವಭಾವ, ನಿನ್ನ ಗುಣ, ನಿನ್ನ ಇಂದ್ರಿಯಪರವಶತೆ, — ಇವುಗಳನ್ನೆಲ್ಲ ನಾನು ಬಾಲ್ಯಾರಭ್ಯ ನೋಡುತ್ತಲಿದ್ದೇನೆ. ಸಹೋದರಭಾವದಿಂದ, ಇವುಗಳನ್ನು ನೋಡಿಯೂ ನೋಡದಂತೆ ಇರುತ್ತಿದ್ದೆನು. ಈ ವಿಷ

ಯುವನ್ನು ತಿಳಿದುಕೊಳ್ಳದೆ, ನನ್ನಲ್ಲಿ ನೀನು ಅತ್ಯಂತಾನುರಾಗವನ್ನು ತೋರಿದುದು ನನಗೆ ಬಹಳ ಆಶ್ಚರ್ಯವನ್ನುಂಟುಮಾಡುತ್ತದೆ. ವಿವಾಹಮಾಡಿಕೊಳ್ಳುವ ವಧೂವರರು , ಪರಸ್ಪರಾನುರಕ್ತರಾಗಿರಬೇಕು ; ಅಥವಾ, ಉದಾಸೀನರಾಗಿಯಾದರೂ ಇರಬೇಕು ನೀನು ನನ್ನಲ್ಲಿಟ್ಟಿರುವ ಅತ್ಯಂತಾನುರಾಗಕ್ಕೆ ಸರಿಯಾಗಿ ನಿನ್ನಲ್ಲಿ ನನಗೆ ಲೇಶಮಾತ್ರವಾದರೂ ಪ್ರೀತಿಯಿಲ್ಲ ; ಕೊನೆಗೆ ಉದಾಸೀನತೆಯೂಕೂಡ ಇಲ್ಲ. ಪರಂತು, ನಿನ್ನ ಸಂಭಾಷಣೆಯನ್ನೂ, ಸಹವಾಸವನ್ನೂ, ಕೊನೆಗೆ ನೀನು ವಾಸಮಾಡುವ ಪಟ್ಟಣದಲ್ಲಿ ವಾಸವನ್ನೂಕೂಡ ಮಾಡಬಾರದೆಂದು, ನಾನು ದೃಢವಾಗಿ ಸಂಕಲ್ಪಿಸಿರುವೆನು. ಪ್ರಾಣವನ್ನಾದರೂ ಬಿಡುವೆನೇ ಹೊರತು, ನಾನು ನಿನ್ನನ್ನು ವಿವಾಹಮಾಡಿಕೊಳ್ಳುವವಳಲ್ಲ. ನನ್ನಲ್ಲಿ ವ್ಯಾಮೋಹವನ್ನು ಬಿಟ್ಟು ನಿನಗೆ ಅನುರೂಪಳಾದ ಸ್ತ್ರೀಯನ್ನು ಹುಡುಕಿ ವಿವಾಹ ಮಾಡಿಕೊಂಡು ಸುಖವಾಗಿರು. ಈ ನನ್ನ ಬುದ್ಧಿವಾದವನ್ನು ಕೇಳಿದರೆ, ಇದರಿಂದ ನಮ್ಮಿಬ್ಬರಿಗೂ ಒಳ್ಳೆಯದಾಗುವುದು ; ಇಲ್ಲದಪಕ್ಷದಲ್ಲಿ, ನಾವಿಬ್ಬರೂ ನಮ್ಮ ಬಂಧುಬಳಗಗಳೊಡನೆ ಬಹಳ ಸಂಕಟಕ್ಕೆ ಗುರಿಯಾಗಬೇಕಾಗುವುದು. ಚೆನ್ನಾಗಿ ಪರ್ಯಾಲೋಚಿಸಿ, ನನ್ನಮೇಲಿನ ಆಶೆಯನ್ನು ಪರಿತ್ಯಾಗಮಾಡಿ, ನಿನಗೆ ಅನುರೂಪಳಾದ ಸ್ತ್ರೀಯನ್ನು ಪಡೆದುಕೊಂಡು, ನೀನು ಸುಖವಾಗಿ ಬಾಳುವೆಯೆಂದು ನಂಬಿರತಕ್ಕ, ನಿನ್ನ ಸಹೋದರಿಯಾದ

**ಕಾಮಮೋಹಿನಿ.**

ಈ ಕಾಗದವನ್ನು ಓದಿದ ಕೂಡಲೆ, ಶಂಬರನಿಗೆ ಬಹುಕ್ಲೇಶವುಂಟಾಯಿತು. ಈ ಕ್ಲೇಶವು ಕ್ರಮಕ್ರಮವಾಗಿ ಪೂರ್ವಾಪರಜ್ಞತೆಯನ್ನುತಪ್ಪಿಸಿತು.

ಶಂಬರ—ಸುಮಿತ್ರನೆ! ಇವಳಿಗೆ ನನ್ನಲ್ಲಿ ಇಷ್ಟು ದ್ವೇಷವಿರಲಿಲ್ಲ. ಈ ಲೇಖನವನ್ನು ನೋಡಿದರೆ, ಇವಳ ಮನಸ್ಸು ಬಹಳ ಕ್ರೂರವಾಗಿ ಮಾರ್ಪಡಿಸಲ್ಪಟ್ಟಿದೆಯೆಂದೂ ಇದಕ್ಕೆ ಪರಂತಪನು ಮುಖ್ಯಕಾರಣವೆಂದೂ ತೋರುತ್ತದೆ. ಇವನು ನಮ್ಮ ಮನೆಗೆ ಬಂದಾರಭ್ಯ, ಇವಳ ನಡತೆಯಲ್ಲಿ ಬಹಳ ಬದಲಾವಣೆಯುಂಟಾಗಿದೆ. ಇವನಿಗೆ ತಕ್ಕ ಪ್ರತೀಕಾರವನ್ನು ಮಾಡುತ್ತೇನೆ.

ರೋಷಾವೇಶದಿಂದ ಪಿಸ್ತೂಲನ್ನು ತೆಗೆದು, ಅದನ್ನು ಸರಿಯಾಗಿ ಬಾರ್ಮಾಡಿಕೊಂಡು ಹೊರಡುವುದಕ್ಕೆ ಉದ್ಯುಕ್ತನಾದನು.

**ಸುಮಿತ್ರ**—ಎಲೈ ಶಂಬರನೆ ! ನಿನ್ನ ಕೋಪವನ್ನು ಸಮಾಧಾನಮಾಡಿಕೊ. ಈ ವಿಷಯದಲ್ಲಿ ಪರಂತಪನು ನಿರಪರಾಧಿಯೆಂದು ತೋರುತ್ತದೆ.

**ಶಂಬರ**—ಅದು ಹೇಗೆ ?

**ಸುಮಿತ್ರ**—ಕಾಮಮೋಹಿನಿಯು, ನಿನ್ನನ್ನು ವಿವಾಹಮಾಡಿಕೊಳ್ಳುವುದಿಲ್ಲವೆಂದು, ನನಗೂ ಒಂದು ಕಾಗದವನ್ನು ಬರೆದಿರುತ್ತಾಳೆ. ಈ ಯೆರಡು ಕಾಗದಗಳೂ ನನ್ನ ಬಳಿಗೆ ಬಂದಕೂಡಲೆ, ನನ್ನ ಕಾಗದವನ್ನು ಓದಿ ನೋಡಿಕೊಂಡು, ಕಾಮಮೋಹಿನಿಯನ್ನು ಎಲ್ಲೆಲ್ಲಿಯೂ ಹುಡುಕಿದೆನು. ಎಲ್ಲಿಯೂ ಕಾಣದೆ ಇದ್ದುದರಿಂದ, ಪರಂತಪನ ವಿಷಯದಲ್ಲಿ ನನಗೂ ಅನುಮಾನಹುಟ್ಟಿತು. ಆದರೆ, ಮನೆಗೆ ಬಂದು ನೋಡುವಲ್ಲಿ, ಅವನು ಅತಿಥಿಗಳ ಜತೆಯಲ್ಲಿ ವಿನೋದವಾಗಿ ಸಲ್ಲಾಪಮಾಡುತ್ತಿದ್ದನು. ಈ ಮರಾಲೋಚನೆಗೆ ಸೇರಿದ್ದರೆ ಇವನೂ ಇವಳ ಜತೆಯಲ್ಲಿ ಹೊರಟುಹೋಗುತ್ತಿರಲಿಲ್ಲವೆ ?

**ಶಂಬರ**—ಕಾಮಮೋಹಿನಿನ್ನು ಸಂಕೇತಮಾಡಿ ಯಾವುದಾದರೂ ಒಂದು ಸ್ಥಳಕ್ಕೆ ಕಳುಹಿಸಿ, ಈರೀತಿಯಲ್ಲಿ ಅಭಿನಯಿಸುತಿರಕೂಡದೋ ?

**ಸುಮಿತ್ರ**—ಹಾಗೆ ಇದ್ದರೂ ಇರಬಹುದು ; ಆದಾಗ್ಯೂ, ಈಗ ಅವನು ಬಹುಜನ ಅತಿಥಿಗಳ ಮಧ್ಯದಲ್ಲಿ ಇದ್ದಾನೆ. ಈ ಕಾಲದಲ್ಲಿ ದುಡುಕುವುದು ಸರಿಯಲ್ಲ. ಇದಲ್ಲದೆ, ಕಾಮಮೋಹಿನಿಯ ಪತ್ತೆಗಾಗಿ ಚಾರರನ್ನು ಕಳುಹಿಸಿದ್ದೇನೆ. ಜಾಗ್ರತೆಯಲ್ಲಿಯೇ ಅವಳನ್ನು ಬರಮಾಡಿ, ನಿನ್ನವಿಷಯದಲ್ಲಿ ಪ್ರಸನ್ನಳಾಗುವಂತೆ ಮಾಡುತ್ತೇನೆ. ನೀನು ದುಡುಕದಿರು.

ಅವನ ಪಿಸ್ತೂಲನ್ನೂ ಇತರ ಆಯುಧಗಳನ್ನೂ ಒಂದು ಕೊಠಡಿಯಲ್ಲಿ ಹಾಕಿ, ಅದಕ್ಕೆ ಬೀಗಹಾಕಿಕೊಂಡು, ಮುಂದಿನ ಕೆಲಸಗಳಿಗೆ ಪ್ರಯತ್ನ ಮಾಡುವುದಾಗಿ ಹೇಳಿ ಹೊರಟುಹೋದನು. ಆದರೂ, ಶಂಬರನು ಉನ್ಮತ್ತಪ್ರಲಾಪವನ್ನು ಮಾಡುತ್ತಾ, ಹಾಗೆಯೇ ರೇಗುತ್ತಾ, ಪರಂತಪನನ್ನು ಬೈಯುತ್ತಾ ಹುಚ್ಚನಂತೆ ನಡೆಯುವುದಕ್ಕೆ ಉಪಕ್ರಮಿಸಿದನು. ಕೂಡಲೆ, ಸುಮಿತ್ರನು ಕೆಲವುಜನ ಭೃತ್ಯರನ್ನು ಕರೆದು, ಅವನನ್ನು ಹೊರಗೆ ಬಿಡಕೂಡದೆಂದು ಏಕಾಂತವಾಗಿ ಅವರಿಗೆ ಹೇಳಿ, ತಾನು ತನ್ನಕೊಠಡಿಗೆ ಹೋಗಿ, ಪರಂತಪನಿಗೆ ಒಂದು ಚೀಟಿಯನ್ನು ಬರೆದು ಕಳುಹಿಸಿದನು. ಕೂಡಲೇ ಪರಂತಪನು ಇವನ ಕೊಠಡಿಗೆ ಬಂದನು.

ಸುಮಿತ್ರ—ಅಯ್ಯೋ! ಪರಂತಪನೆ! ನಿನ್ನನ್ನು ಪುತ್ರನಿರ್ವಿಶೇಷವಾಗಿ ನಾನು ನೋಡುತ್ತಿದ್ದೆನು. ನೀನೇ ಮಾಧವನೆಂಬುದಾಗಿ ತಿಳಿದುಕೊಂಡು, ನಿನ್ನಲ್ಲಿ ಭ್ರಾತೃವಾತ್ಸಲ್ಯವನ್ನು ಇಟ್ಟಿರುವೆನು. ನನ್ನ ವಿಷಯದಲ್ಲಿಯೂ ನೀನು ಸೌಹಾರ್ದವುಳ್ಳವನಾಗಿರಬೇಕಾದುದು ಆವಶ್ಯಕವಲ್ಲವೆ?

ಪರಂತಪ—ಇದೇನು ಹೀಗೆ ಹೇಳುವೆ? ಈಗ ನಿನ್ನ ಭಾವನೆ ಹೇಗಾದರೂ ಇರಲಿ; ನನಗೆ ನಿನ್ನಲ್ಲಿ ಪಿತೃಭಕ್ತಿಯು ಅಕೃತ್ರಿಮವಾಗಿರುವುದು. ಈ ರೀತಿಯಲ್ಲಿ ನೀನು ಮಾತನಾಡುವುದು ನನಗೆ ಬಹಳ ವ್ಯಥೆಯನ್ನುಂಟು ಮಾಡುತ್ತದೆ.

ಸುಮಿತ್ರ—ನನ್ನಲ್ಲಿ ನಿನಗಿರತಕ್ಕ ವಿಶ್ವಾಸವು ಅಕೃತ್ರಿಮವಾಗಿದ್ದರೆ, ಈಗ ಕಾಮಮೋಹಿನಿ ಯೆಲ್ಲಿರುವಳು?— ಹೇಳು.

ಪರಂತಪ—ಅವಳಿಗೆ ಆಪ್ತರಾದವರ ಬಳಿಯಲ್ಲಿರುವಳು.

ಸುಮಿತ್ರ—ಅವಳನ್ನು ಚಿಕ್ಕಂದಿನಿಂದ ಸಾಕಿ ಸಲಹಿ ಚಿಕ್ಕವಳನ್ನು ದೊಡ್ಡವಳನ್ನಾಗಿ ಮಾಡಿದ ನನಗಿಂತಲೂ ಆಪ್ತರು ಯಾರಿರುವರು?

ಪರಂತಪ—ಇದಕ್ಕೆ ಉತ್ತರವನ್ನು ಅವಳೇ ಕೊಡಬೇಕು.

ಸುಮಿತ್ರ—(ಹುಬ್ಬುಗಳನ್ನು ಗಂಟುಹಾಕಿಕೊಂಡು, ಕಣ್ಣುಗಳಲ್ಲಿ ಕಿಡಿಗಳನ್ನು ಉದರಿಸುತ್ತ ಸರ್ವಾವಯವಗಳನ್ನೂ ನಡಗಿಸುತ) ಏನೆಂದೆ? ಈ ಪ್ರಶ್ನೆಗೆ ಅವಳೇ ಉತ್ತರಕೊಡಬೇಕೋ? ಅವಳಿಗೆ ದುರ್ಬೋಧನೆಯನ್ನು ಮಾಡಿ ಇಲ್ಲಿಂದ ರವಾನಿಸಿದ ನಿನಗೆ ಈ ಪ್ರಶ್ನೆಗೆ ಉತ್ತರಕೊಡುವುದು ಅಸಾಧ್ಯವೋ? ಅವಳಿರುವ ಸ್ಥಳವನ್ನು ನೀನು ಬಲ್ಲೆ. ಕೂಡಲೇ ಅವಳನ್ನು ತೋರಿಸಿದರೆ ಸರಿ; ಇಲ್ಲದಿದ್ದರೆ ನಿನ್ನ ದೌರಾತ್ಮ್ಯಕ್ಕೆ ತಕ್ಕ ಫಲವನ್ನು ಈಗಲೇ ಅನುಭವಿಸುವೆ.

ಪರಂತಪ—ಅವಳು ಇರತಕ್ಕ ಸ್ಥಳವನ್ನು ನಾನು ಬಲ್ಲೆನು. ಆದರೂ ಅದನ್ನು ನಾನು ತೋರಿಸುವುದಿಲ್ಲ. ನಿನ್ನ ಮನೆಗೆ ಬಂದಾರಭ್ಯ, ನಾನು ದೊಡ್ಡ ಮನುಷ್ಯನಂತೆ ಇದ್ದೆನೇ ಹೊರತು, ದುರಾತ್ಮನಂತೆ ಎಂದಿಗೂ ನಡೆದುಕೊಳ್ಳಲಿಲ್ಲ; ದೌರಾತ್ಮ್ಯದ ಫಲವನ್ನು ನಾನು ಅನುಭವಿಸತಕ್ಕವನೂ ಅಲ್ಲ.

ಸುಮಿತ್ರ—ನೀನು ದುರಾತ್ಮನು ಮಾತ್ರವೇ ಅಲ್ಲ; ಕೃತಘ್ನನು ಕೂಡ ಅಹುದು. ನೀನು ನನ್ನ ಮನೆಗೆ ಬಂದು, ನನ್ನಿಂದ ಸತ್ಕೃತನಾಗಿ,

ಇಲ್ಲಿ ಗೃಹಚ್ಛಿದ್ರಗಳನ್ನುಂಟುಮಾಡಿ, ಕಾಮಮೋಹಿನಿಯನ್ನು ಮರುಳು ಮಾಡಿ, ಶಂಬರನ ವಿಷಯದಲ್ಲಿ ಆಕೆಗೆ ಜುಗುಪ್ಸೆಯನ್ನು ಹುಟ್ಟಿಸಿ, ಅವಳನ್ನು ಅಪಹರಣಮಾಡಿ, ಇಷ್ಟಜನ ಬಂಧುಮಿತ್ರರ ಮುಂದೆ ನನಗೆ ಅನಿರ್ವಚನೀಯವಾದ ಅಪಮಾನವನ್ನೂ ಕ್ಲೇಶವನ್ನೂ ಉಂಟುಮಾಡಿದ್ದೀಯೆ. ಶಂಬರನು ಇದರಿಂದ ಬುದ್ಧಿಭ್ರಂಶವನ್ನು ಹೊಂದಿ, ಉನ್ಮತ್ತಾವಸ್ಥೆಯಲ್ಲಿರುತ್ತಾನೆ. ನಾನು ಜೀವಿಸಿದ್ದರೂ ಸತ್ತವನಂತೆಯೇ ಇರುತ್ತೇನೆ. ಈ ಅನರ್ಥಗಳಿಗೆ ನೀನೇ ಕಾರಣಭೂತನು. ಕಾಮಮೋಹಿನಿಯನ್ನು ತೋರಿಸುತ್ತೀಯೊ?- ನಿನ್ನ ದೌರಾತ್ಮ್ಯಕ್ಕಾಗಿ ನಿನ್ನ ಪ್ರಾಣವನ್ನು ಬಲಿಯಾಗಿ ಒಪ್ಪಿಸುತ್ತೀಯೊ?

**ಪರಂತಪ**—ಎಲೈ ಸುಮಿತ್ರನೇ! ನೀನು ವೃದ್ಧನು; ನನ್ನ ವಿಶ್ವಾಸಕ್ಕೆ ಪಾತ್ರನು; ನನ್ನ ಮಿತ್ರನಾದ ಮಾಧವನಿಗೆ ಸಹೋದರನು. ಈ ಕಾರಣಗಳಿಂದ, ನೀನು ಕೋಪಪರವಶನಾಗಿ ಯುಕ್ತಾಯುಕ್ತವಿಚಾರಹೀನನಾಗಿ ಆಡತಕ್ಕ ದುರ್ಭಾಷೆಗಳನ್ನು ಮನ್ನಿಸುವೆನು. ನೀನು ನನ್ನಲ್ಲಿ ಆರೋಪಿಸಿರುವ ಅಪರಾಧಗಳೆಲ್ಲ ಅಸತ್ಯಗಳು. ನಾನು ನಿನ್ನ ಮನೆಗೆ ಬಂದು ಸತ್ಕೃತನಾದದ್ದು ನಿಜ; ಆದರೆ, ಈ ಸತ್ಕಾರದ ಬಲದಿಂದ ನೀನು ಇಂಥ ಅಪರಾಧಗಳನ್ನು ಆರೋಪಿಸುವೆಯೆಂದು ತಿಳಿದಿದ್ದರೆ, ನಿನ್ನ ಮನೆಯಲ್ಲಿ ಗಂಗಾಮೃತಪಾನವನ್ನು ಕೂಡ ಮಾಡುತ್ತಿರಲಿಲ್ಲ. ಕಾಮಮೋಹಿನಿಗೆ ನಾನು ದುರ್ಬೋಧನೆಯನ್ನು ಮಾಡಿದವನೂ ಅಲ್ಲ; ನಿನ್ನ ಮನೆಯಲ್ಲಿ ಗೃಹಚ್ಛಿದ್ರವನ್ನುಂಟುಮಾಡಿದವನೂ ಅಲ್ಲ; ಆ ಚಂದ್ರಮುಖಿಯನ್ನು ಅಪಹರಿಸಿ ನಾನು ರವಾನಿಸಲೂ ಇಲ್ಲ. ಈ ಆರೋಪಣೆಗಳನ್ನು ನೀನು ವಾಪಸುತೆಗೆದುಕೊಳ್ಳದಿದ್ದರೆ, ಈ ನಿಮಿಷದಲ್ಲಿ ನಿನಗೆ ತಕ್ಕ ಪ್ರತೀಕಾರವನ್ನು ಮಾಡುತ್ತೇನೆ.

**ಸುಮಿತ್ರ**—ಈ ಕಾಮಮೋಹಿನಿಯನ್ನು ಶಂಬರನಿಗೆ ಕೊಡಬೇಕೆಂದು ನಾನು ನಿಷ್ಕರ್ಷೆಮಾಡಿರುವುದು ನಿನಗೆ ತಿಳಿಯದೆ? ಈ ವಿವಾಹಕ್ಕೆ ವಿಘ್ನವನ್ನು ನೀನು ಮಾಡಿಲ್ಲವೆ? ಮಾಧವನ ಆಸ್ತಿಯು ನಿನಗೆ ಇರಲಿ; ಕಾಮಮೋಹಿನಿಯಾದರೂ ಶಂಬರನಿಗೆ ಇರಲೆಂದು ನಾನು ಸಂಕಲ್ಪಿಸಿದ್ದಾಗ್ಗೂ. ನೀನು ಈ ವಿವಾಹಕ್ಕೆ ವಿಘ್ನವನ್ನು ಮಾಡಿಲ್ಲವೆ? ಇವಳು ಮನೆಯನ್ನು ಬಿಟ್ಟು ಹೋಗುವುದಕ್ಕೆ ನೀನೇ ಕಾರಣನು.

ಪರಂತಪ-ಕಾಮಮೋಹಿನಿಯು ಶಂಬರನಿಗೆ ವಿವಾಹವಾಗಕೂಡದೆಂದು ಅಭಿನಿವೇಶವು ನನಗಿಲ್ಲ; ಇದಕ್ಕೆ ನಾನು ವಿಘ್ನವನ್ನೂ ಮಾಡಿಲ್ಲ. ಮಾಧವನ ಆಸ್ತಿಯ ವಿಷಯದಲ್ಲಿ ನಾನು ಅಪೇಕ್ಷೆಯುಳ್ಳವನಾಗಿದ್ದೆನೆ? ಸಂಪಾದಿಸುವುದಕ್ಕೆ ಶಕ್ತಿಯಿಲ್ಲದ ಹೇಡಿಗಳು ಅನ್ಯರ ಆಸ್ತಿಯನ್ನಪೇಕ್ಷಿಸಬೇಕು. ಮಾಧವನು-ಈ ಆಸ್ತಿಯನ್ನು ತೆಗೆದುಕೊಂಡು ಇದರಲ್ಲಿ ಕೆಲವು ವಿನಿಯೋಗಗಳನ್ನು ಮಾಡಬೇಕೆಂದು ಆಜ್ಞೆಮಾಡಿರುವುದರಿಂದಲೂ, ಈ ವಿಷಯದಲ್ಲಿ ನಿನ್ನನ್ನು ಕಾಣು ಎಂಬುದಾಗಿ ಹೇಳದುದರಿಂದಲೂ ನಾನು ನಿನ್ನ ಬಳಗೆ ಬಂದೆನು ನಿನ್ನ ತಾತ್ಪರ್ಯಕ್ಕನುಸಾರವಾಗಿ, ಮಾಧವನ ಉಯಿಲಿನ ವಿಚಾರವನ್ನು ಈ ವಿವಾಹವು ಪೂರಯಿಸುವವರೆಗೂ ಬಹಿರಂಗಪಡಿಸದೆ ಇದ್ದೇನೆ. ಹೀಗಿದ್ದಾಗ್ಯೂ, ಇಂಥ ದುರಾಲೋಚನೆಗಳನ್ನು ನೀನು ಮಾಡಿದ್ದೀಯೆ. ಇವುಗಳನ್ನು ವಾಪಸು ತೆಗೆದುಕೊ.

ಸುಮಿತ್ರ—ನೀನು ಕಳ್ಳ, ಸುಳ್ಳುಗಾರ, ಕೃತ್ರಿಮಿ; ಅಸಾಧಾರಣವಾದ ದೌರಾತ್ಮ್ಯವನ್ನು ಮಾಡಿ ನನ್ನನ್ನು ಹೆದರಿಸುತ್ತೀಯಾ? ಶಂಬರನು, ನೀನು ಮಾಡಿರತಕ್ಕ ದೌರಾತ್ಮ್ಯದಿಂದ ರೌದ್ರಾವೇಶವುಳ್ಳವನಾಗಿದ್ದಾನೆ. ನಾನು ನಿರೋಧಿಸದಿದ್ದರೆ ಇಷ್ಟುಹೊತ್ತಿಗೆ ನಿನ್ನನ್ನು ಸಂಹರಿಸುತ್ತಿದ್ದನು. ಈಗಲೂ ನಿನಗೆ ವಿಪತ್ತು ತಪ್ಪಲಿಲ್ಲ. ಕಾಮಮೋಹಿನಿಯನ್ನು ತೋರಿಸುವೆಯೋ?—ಅಥವಾ ನಿನ್ನ ದೌರಾತ್ಮ್ಯಕ್ಕೆ ತಕ್ಕ ಫಲವನ್ನು ಪಡೆಯುತ್ತೀಯೊ?

ಇದುವರೆಗೂ ಪ್ರಸನ್ನನಾಗಿ ಮಂದಹಾಸ ಪೂರ್ವಕವಾಗಿ ಮಾತನಾಡುತ್ತಿದ್ದ ಪರಂತಪನಿಗೆ, ಈ ಮಾತುಗಳನ್ನು ಕೇಳದ ಕೂಡಲೇ ಆಕ್ರೋಶ ಬಂದಿತು. ಆ ಕ್ಷಣದಲ್ಲಿಯೇ ಈತನ ಹುಬ್ಬುಗಳು ಗಂಟುಬಿದ್ದುವು; ಕಣ್ಣುಗಳು ಕೆಂಪಾದುವು. ನಿಗ್ರಹಿಸುವುದಕ್ಕಾಗದಷ್ಟು ಆಗ್ರಹವುಂಟಾಯಿತು. ಕೂಡಲೇ ಎದ್ದು—

ಪರಂತಪ ಎಲೈಸುಮಿತ್ರನೇ! ಇದುವರೆಗೂ ನೀನು ಹಿರಿಯುವನೆಂಬುದಾಗಿಯೂ, ಗೌರವಿಸುವುದಕ್ಕೆ ಪಾತ್ರನೆಂಬುದಾಗಿಯೂ ಭಾವಿಸಿ, ನಿನ್ನಲ್ಲಿ ವಿನೀತನಾಗಿದ್ದೆನು. ಈ ವಿನಯಕ್ಕೆ ನೀನು ಅರ್ಹನಲ್ಲವೆಂದು ಈಗ ಗೊತ್ತಾಗುತ್ತದೆ. ನೀನು ದೊಡ್ಡಮನುಷ್ಯನೆಂದು ಭಾವಿಸಿದ್ದೆನು. ದೊಡ್ಡಮನುಷ್ಯತನಕ್ಕೂ ನಿನಗೂ ಬಹಳ ದೂರವೆಂದು ಈಗ ಗೊತ್ತಾಯಿತು. ನೀನು

ಬೆದರಿಸುವುದನ್ನು ನೋಡಿದರೆ ನನಗೆ ಆಶ್ಚರ್ಯವಾಗುತ್ತದೆ. ನೀನೂ ನಿನ್ನ ಸಹೋದರನ ಪುತ್ರನೂ ಎಷ್ಟು ಮಟ್ಟನವರು ! ನಿಮ್ಮ ಯೋಗ್ಯತೆ ಯೆಂತಹುದು ! ನೀವು ನನಗೆ ತೃಣಕ್ಕಿಂತಲೂ ಕಡೆಯಾಗಿದ್ದೀರಿ. ಇನ್ನು ವಿಶೇಷವಾಗಿ ದುಡುಕುಮಾತಾಡಿದ ಪಕ್ಷದಲ್ಲಿ, ನಿನ್ನ ದುರ್ವಿನಯಕ್ಕೆ ತಕ್ಕ ಫಲವನ್ನು ಅನುಭವಿಸುವಿರಿ. ಹುಷಾರಾಗಿರು. ನಿನ್ನ ಸ್ನೇಹದಮೇಲೆ ದೃಷ್ಟಿಯಿಟ್ಟು, ಮಾಧವನ ಉಯಿಲನ್ನು ಇದುವರೆಗೂ ನಾನು ಪ್ರಕಟಮಾಡಲಿಲ್ಲ. ನೀನು ಮಾಧವನ ಸಹೋದರನಾದುದರಿಂದ, ನಿನ್ನನ್ನು ಮಾಧವನಂತೆ ಭಾವಿಸಿದ್ದೆನು. ನನಗೆ ಮಾಡಿದ ಸತ್ಕಾರದ ವಿಷಯದಲ್ಲಿ ನೀನು ನಿನ್ನ ಪ್ರತಿಷ್ಠೆಯನ್ನು ಕೊಚ್ಚಿಕೊಂಡೆ. ಇದು ನಿನ್ನ ಯೋಗ್ಯತೆಯನ್ನು ಸ್ಪಷ್ಟಪಡಿಸುತ್ತದೆ. ಆದರೆ, ನೀನು ಮಾಡಿದ ಸತ್ಕಾರಕ್ಕೆ ನಾನು ಕೃತಜ್ಞನಾಗಿದ್ದೇನೆ. ಇದಕ್ಕಾಗಿ ನೀನು ನನ್ನಿಂದ ಯಾವಾಗ ಏನಾಗಬೇಕೆಂದು ಅಪೇಕ್ಷಿಸಿದಾಗ್ಯೂ, ಅದನ್ನು ನಾನು ನನ್ನ ಶಕ್ತಿಮೀರಿ ನಡೆಸಿ ನಿನ್ನ ಸಾಲವನ್ನು ತೀರಿಸುತ್ತೇನೆ. ನೀನು ಈಗ ಮಾಡಿರತಕ್ಕ ಅಪಮಾನವು ಬಹಳ ದುಸ್ಸಹವಾದುದು. ಇನ್ನು ಒಂದು ನಿಮಿಷವೂ ನಾನು ನಿನ್ನ ಮನೆಯಲ್ಲಿರತಕ್ಕವನಲ್ಲ ; ನಿನ್ನ ಸತ್ಕಾರವನ್ನು ಪರಿಗ್ರಹಿಸತಕ್ಕವನೂ ಅಲ್ಲ. ಮಾಧವನ ಉಯಿಲನ್ನು ಆಚರಣೆಗೆ ತರತಕ್ಕ ವಿಷಯದಲ್ಲಿ, ನೀನು ವಾಗ್ದಾನಮಾಡಿದಂತೆ ಸಹಾಯ ಮಾಡುವುದಾದರೆ ಮಾಡಬಹುದು ; ಇಲ್ಲದಪಕ್ಷದಲ್ಲಿ ಸರ್ಕಾರದಮೂಲಕ ನಡೆಯತಕ್ಕ ಕೆಲಸಗಳನ್ನು ನಡೆಯಿಸುತ್ತೇನೆ. ಈ ಪಟ್ಟಣದ ಕಲ್ಪತರುವೆಂಬ ಹೋಟಲಿನಲ್ಲಿ ನಾನು ಇರುತ್ತೇನೆ. ಆವಶ್ಯಕವಾದ ಪಕ್ಷದಲ್ಲಿ ನೀನು ನನ್ನನ್ನು ಅಲ್ಲಿ ನೋಡಬಹುದು.

ಎಂಬುದಾಗಿ ಹೇಳಿ, ಕೂಡಲೆ ಆತನ ಸಾನ್ನಿಧ್ಯವನ್ನು ಬಿಟ್ಟು-ಪರಂತಪನು ಹೊರಟುಹೋದನು. ಸುಮಿತ್ರನು, ಈ ನಿಶ್ಚಿತಾರ್ಥ ಮಹೋತ್ಸವಕಾಲದಲ್ಲಿ ಕಾಮಮೋಹಿನಿ ಹೊರಟುಹೋದುದರಿಂದ ಉಂಟಾದ ದುಃಖವನ್ನೂ ಅಪಮಾನವನ್ನೂ ಸಹಿಸಲಾರದೆ, ಸ್ವಲ್ಪಹೊತ್ತು ಇತಿಕರ್ತವ್ಯತಾಮೂಢನಾಗಿ, ಅನಂತರದಲ್ಲಿ ತಾನು ಕಳುಹಿಸಿದ ಲಗ್ನಪತ್ರಿಕೆಗೆ ಅನುಸಾರವಾಗಿ ಬಂದಿದ್ದ ಅತಿಥಿಗಳನ್ನು ಭೋಜನ ತಾಂಬೂಲ ಪುಷ್ಪಹಾರಾದಿಗಳಿಂದ ಉಪಚರಿಸಿ, ಅನಂತರ ನಿಶ್ಚಿತಾರ್ಥವಿಷಯದಲ್ಲಿ ಸಂಭವಿಸಿದ ಅಸಂದರ್ಭಗ

ಳನ್ನು ಸೂಕ್ಷ್ಮವಾಗಿ ತಿಳಯಿಸಿದನು. ಎಲ್ಲರೂ ಅತ್ಯಂತ ವಿಸ್ಮಿತರಾಗಿ "ಅನನುರೂಪವಾದ ಘಟನವನ್ನು ಮಾಡಿಸಬೇಕೆಂದು ಮನುಷ್ಯನು ಯೋಚಿಸಿದರೆ, ದೈವವು ಈ ರೀತಿ ವಿಘ್ನಮಾಡುವುದು ಕೂಡ ಉಂಟೆಂಬುದು ಈಗ ವ್ಯಕ್ತವಾಯಿತು." ಎಂದು ಹೇಳಕೊಂಡು ಹೊರಟುಹೋದರು.

## ಅಧ್ಯಾಯ ೬.

ಪರಂತಪನು ಕಲ್ಪತರುವೆಂಬ ಹೋಟಲಿಗೆ ಹೋಗಿ, ಅಲ್ಲಿನ ಯಜಮಾನನನ್ನು ಕರೆದು, ಅದರಲ್ಲಿ ತನಗೆ ಅನುಕೂಲವಾದ ಕೊಟಡಿಗಳಗೆ ಬಾಡಿಗೆಯನ್ನು ನಿಷ್ಕರ್ಷೆಮಾಡಿ, ಅಲ್ಲಿ ತನ್ನ ಸಾಮಾನುಗಳನ್ನು ಇಟ್ಟು ಬೀಗಗಳನ್ನು ಹಾಕಿಕೊಂಡು, ಆರ್ಯಕೀರ್ತಿಯ ಮನೆಯನ್ನು ಕುರಿತು ಹೊರಟನು. ಅಲ್ಲಿಗೆ ಹೋಗಿ ಬಾಗಿಲನ್ನು ತಟ್ಟಿದಕೂಡಲೆ, ಒಬ್ಬ ಹೆಂಗಸು ಬಂದು ಬಾಗಿಲನ್ನು ತೆಗೆದಳು. ಕಾಮಮೋಹಿನಿಯ ವೃತ್ತಾಂತವನ್ನು ವಿಚಾರಿಸಿದ ಕೂಡಲೆ, ಅವಳು ಇವನನ್ನು ಒಳಕ್ಕೆ ಕರೆದುಕೊಂಡು ಹೋದಳು. ಅಲ್ಲಿ ಆರ್ಯಕೀರ್ತಿಯೂ ಅವಳ ತಂದೆತಾಯಿಗಳೂ ಕಾಮಮೋಹಿನಿಯೂ ಮಾತನಾಡುತಿದ್ದರು. ಪರಂತಪನನ್ನು ನೋಡಿದಕೂಡಲೆ, ಕಾಮಮೋಹಿನಿಯು ಥಟ್ಟನೆ ಎದ್ದು, ಆತನಿಗೆ ವಂದನೆಯನ್ನು ಮಾಡಿ, ಆತನನ್ನು ಕರೆದುಕೊಂಡು ಹೋಗಿ, ತನ್ನ ಸ್ನೇಹಿತಳಿಗೂ ಆಕೆಯ ತಾಯಿತಂದೆಗಳಾದ ಸತ್ಯವತೀ ಸತ್ಯಶರ್ಮರುಗಳಗೂ ಭೇಟಿಮಾಡಿಸಿದಳು.

ಸತ್ಯಶರ್ಮ— ಅಯ್ಯಾ! ಪರಂತಪ! ಕಾಮಮೋಹಿನಿಯು ನನ್ನ ಮಗಳಿಗೆ ಪರಮಾಪ್ತಳು. ಆದುದರಿಂದಲೇ, ಈಕೆಯು ನನಗೆ ಮಗಳ ಸಮಾನಳು. ಈಕೆಯು, ತನ್ನ ಸಾಕುತಂದೆಯಿಂದ ಗೊತ್ತುಮಾಡಲ್ಪಟ್ಟ ದುರಾತ್ಮನಾದ ಶಂಬರನನ್ನು ಮದುವೆಮಾಡಿಕೊಳ್ಳುವುದಿಲ್ಲವೆಂದು ದೃಢಸಂಕಲ್ಪಮಾಡಿ, ಸುಪುತ್ರನ ಪೋಷಣೆಯನ್ನು ಪರಿತ್ಯಜಿಸಿ ಇಲಿಗೆ ಬಂದು ಇದ್ದಾಳೆ. ಈಕೆ ಮಾಡುತ್ತಿದ್ದ ನಿನ್ನ ಗುಣಕಥನಗಳನ್ನು ಕೇಳಿ ಸಂತುಷ್ಟರಾಗುತ್ತಿದ್ದೆವು.

ಈಗ ಈ ಸರ್ವಗುಣಗಳಿಗೂ ನಿಧಿಯಾಗಿರುವ ನಿನ್ನನ್ನು ನೋಡಿ, ನಮಗೆ ಅತ್ಯಂತ ಸಂತೋಷವಾಯಿತು. ಈ ಕಾಮಮೋಹಿನಿಯು ಅನಾಥಳು. ಇದುವರೆಗೂ ಸುಮಿತ್ರನು ಈಕೆಗೆ ಪಿತೃಪ್ರಾಯನಾಗಿದ್ದನು ದುಷ್ಟನಾದ ಶಂಬರನಿಗೆ ಈಕೆಯನ್ನು ಕೊಟ್ಟು ವಿವಾಹಮಾಡಬೇಕೆಂದು ಆತನು ಮಾಡಿದ ನಿಶ್ಚಿತಾರ್ಥ ಮಹೋತ್ಸವ ಪ್ರಯತ್ನಕಾಲದಲ್ಲಿ, ಮಾಧವನ ಮರಣಸಮಾಚಾರವು ವಿಘ್ನವಾಗಿ ಪರಿಣಮಿಸಿತು. ಇದಕ್ಕೂ ಲಕ್ಷ್ಯ ಮಾಡದೆ ಪುನಃ ಈ ಪ್ರಯತ್ನಮಾಡಲು, ಆತನಿಗೆ ಈ ಸ್ತ್ರೀರತ್ನದ ಅಧೀನತೆ ತಪ್ಪಿಹೋದುದು ಮಾತ್ರವಲ್ಲದೆ, ಆತನು ಜನಾಪವಾದಕ್ಕೂ ಗುರಿಯಾದನು.

**ಪರಂತಪ**—ಅಯ್ಯಾ! ಸತ್ಯಶರ್ಮನೆ! ನಿನ್ನ ಸೌಜನ್ಯಕ್ಕೆ ನಾನು ಕೃತಜ್ಞನಾಗಿರುವೆನು. ದೈವವ್ಯಾಪಾರವು ವಿಚಿತ್ರವಾದುದ. ಈಕೆಯನ್ನು ಶಂಬರನಿಗೆ ವಿವಾಹಮಾಡಬೇಕೆಂದು ಸುಮಿತ್ರನು ನಿಷ್ಕರ್ಷೆಮಾಡಿ, ಈ ಕಾರ್ಯಕ್ಕೆ ಸಹಾಯಮಾಡಬೇಕೆಂದು ನನಗೆ ಪ್ರೇರಣೆಮಾಡಿದನು. ಅದೇರೀತಿಯಲ್ಲಿ, ನಾನು ಸಹಾಯಮಾಡುವುದರಲ್ಲಿ ಉದ್ಯುಕ್ತನಾಗಿದ್ದೆನು. ಶಂಬರನ ದುಷ್ಟಸ್ವಭಾವಗಳನ್ನೂ ದುರ್ಗುಣಗಳನ್ನೂ ಈಕೆಯ ಮಾತುಗಳಿಂದ ನಾನು ಕೇಳಿದಾರಭ್ಯ, ಸುಮಿತ್ರನ ಪ್ರಯತ್ನಕ್ಕೆ ಸಹಾಯಮಾಡುವುದು ಧರ್ಮವಲ್ಲವೆಂದು ನನ್ನ ಮನಸ್ಸಿಗೆ ತೋರಿತು. ಸುಮಿತ್ರನು ಇವಳನ್ನು ನಾನೇ ಅಪಹರಿಸಿದ್ದೇನೆಂದು ನನ್ನಮೇಲೆ ಅನೇಕತಪ್ಪುಗಳನ್ನು ಆರೋಪಿಸಿದ್ದರಿಂದ, ನಾನು ಆತನ ಮನೆಯನ್ನು ಬಿಟ್ಟು ಕಲ್ಪತರುವಿನಲ್ಲಿ ವಾಸವಾಗಿರುವೆನು. ಈಗ ಈಕೆಯ ಅವಸ್ಥೆಯು ಬಹಳ ಶೋಚನೀಯವಾಗಿದೆ. ನೀನು ಈಕೆಯನ್ನು ಈಗ ಸನ್ನಿಹಿತವಾಗಿರುವ ವಿಪತ್ತು ಕಳೆಯುವವರೆಗೂ ಯಾರಿಗೂ ತಿಳಿಯದಂತೆ ಇಟ್ಟುಕೊಂಡಿದ್ದರೆ, ದೇವರು ನಿನಗೆ ಒಳ್ಳೆಯದನ್ನು ಮಾಡುವನು; ನನ್ನ ಕೈಲಾದ ಉಪಕಾರವನ್ನು ನಾನೂ ಮಾಡುವೆನು.

**ಸತ್ಯಶರ್ಮ**—ಬಹುಕಾಲದಿಂದ ನಾವುಗಳು ಈಕೆಯ ಉಪಕಾರಗಳನ್ನು ಆಗಾಗ್ಗೆ ಹೊಂದುತ್ತಲಿದ್ದೇವೆ. ಈಕೆಯ ಈ ಕಷ್ಟಕಾಲದಲ್ಲಿ ನಮ್ಮ ಕೈಲಾದ ಉಪಕಾರವನ್ನು ಮಾಡುವುದು ನಮಗೆ ಕರ್ತವ್ಯವಾಗಿದೆ. ಈಕೆಯು, ರೂಪಯೌವನಗಳಲ್ಲಿಯೂ ವಿದ್ಯಾವೈದುಷ್ಯಗಳಲ್ಲಿಯೂ ಸೌಶೀಲ್ಯಾದಿಗುಣಗಳಲ್ಲಿಯೂ ಅಸಾಧಾರಣಳಾಗಿರುತ್ತಾಳೆ. ಇಂಥ ಅಮೂಲ್ಯ

ವಾದ ರತ್ನವನ್ನು ಬಡವರಾದ ನಮ್ಮ ಆಶ್ರಯದಲ್ಲಿಡುವುದಕ್ಕಿಂತ ಎಲ್ಲಾ ಭಾಗದಲ್ಲಿಯೂ ಅನುರೂಪನಾದ ನೀನು ಶೀಘ್ರದಲ್ಲಿ ವಿವಾಹಮಾಡಿ ಕೊಂಡು ಅನಾಥಳಾದ ಈಕೆಯನ್ನು ಸನಾಥಳನ್ನಾಗಿ ಮಾಡುವುದು ಸಂತೋಷಕರವೆಂದು ನಾನು ಕೋರುತ್ತೇನೆ.

**ಪರಂತಪ**—ನಿಮ್ಮ ಪ್ರಾರ್ಥನೆಗೆ ನಾನು ಪ್ರತಿ ಹೇಳುವುದಿಲ್ಲ; ಆದರೆ, ವಿವಾಹಕ್ಕೆ ಸರಿಯಾದ ಸಂದರ್ಭಗಳೂ ಕಾಲವೂ ಇನ್ನೂ ಒದಗಿಬಂದಿಲ್ಲ. ಇದಕ್ಕೆ ಬೇಕಾದ ಏರ್ಪಾಡುಗಳನ್ನು ಮಾಡಿಕೊಂಡು ಈ ಕಾರ್ಯವನ್ನು ನೆರವೇರಿಸಬೇಕಾಗಿದೆ.

**ಸತ್ಯಶರ್ಮ**--ಮಾಧವನ ಆಸ್ತಿಯು ನಿನಗೆ ಉಯಿಲುಬರೆಯಲ್ಪಟ್ಟಿದೆ ಯೆಂದು ಕೇಳುತ್ತೇವೆ; ಇದು ವಾಸ್ತವವೆ ?

**ಪರಂತಪ**—ವಾಸ್ತವ ; ಈತನ ಮನೆ ಮಠ ಮೊದಲಾದ ಆಸ್ತಿಗಳ ನ್ನೆಲ್ಲ ಸ್ವಾಧೀನಪಡಿಸಿಕೊಂಡು ಅನಂತರ ಈ ವಿವಾಹವನ್ನು ಮಾಡಿಕೊ ಳ್ಳಬೇಕೆಂದು ಸಂಕಲ್ಪಿಸಿದ್ದೇನೆ.

**ಸತ್ಯಶರ್ಮ**—ಮಾಧವನ ಆಸ್ತಿಯು ಅಪಾರವಾದುದು ; ಆತನ ಮನೆಯು ಅರಮನೆಗೆ ಸಮಾನವಾದುದು. ಆದಾಗ್ಯೂ ಇದು ಅಪೇಕ್ಷಣೀಯವಾದು ದಲ್ಲ. ಈ ಆಸ್ತಿಯನ್ನು ಹೊಂದಿದವರು ಕ್ಷೇಮವಾಗಿಯೂ ಸೌಖ್ಯವಾ ಗಿಯೂ ಇರುವುದು ಕಷ್ಟ. ನನ್ನ ಅನುಭವದಲ್ಲಿ, ಈ ಆಸ್ತಿಯನ್ನು ಹೊಂದಿ ದವರೆಲ್ಲರೂ ಬಹುಕಷ್ಟಪಟ್ಟಿದ್ದಾರೆ. ಅಂಥ ಕಷ್ಟಗಳೇನೂ ನಿನಗೆ ಬಾರದಿ ರಬೇಕೆಂದು ನಾನು ದೇವರನ್ನು ಪ್ರಾರ್ಥಿಸುತ್ತೇನೆ.

**ಪರಂತಪ**—ಮಾಧವನ ಗೃಹಾರಾಮಗಳ ವಿಷಯದಲ್ಲಿ ನಿನ್ನಹಾಗೆಯೇ ಅನೇಕರು ಅನೇಕವಿಧವಾಗಿ ಕಥೆಗಳನ್ನು ಹೇಳುವರು. ಇದನ್ನು ನಿನ್ನ ಮುಖದಿಂದ ವಿಶದವಾಗಿ ಕೇಳಬೇಕೆಂದು ನನಗೆ ಕುತೂಹಲವಿದೆ.

**ಸತ್ಯಶರ್ಮ**—ಹಾಗೆ ಕುತೂಹಲವಿದ್ದಪಕ್ಷದಲ್ಲಿ ಹೇಳುವೆನು, ಕೇಳು. ಈ ಮಾಧವನ ಅರಮನೆಯು, ಇಲ್ಲಿಂದ ಅರ್ಧಮೈಲಿ ದೂರದಲ್ಲಿ ಪರ್ವತ ಗಳಿಂದ ಸುತ್ತಲ್ಪಟ್ಟ ಒಂದು ಕಲ್ಲು ಕಟ್ಟಡವಾಗಿದೆ. ಇದು ಸಾವಿರಾರು ವರ್ಷಗಳ ಮುಂಚೆ ಒಬ್ಬ ಪ್ರಬಲನಾದ ಚೋರನು ಕಟ್ಟಿದ ಕಟ್ಟಡವೆಂದು ಹೇಳುತ್ತಾರೆ. ಈ ಕಟ್ಟಡದ ಸುತ್ತಲೂ ಅತ್ಯಂತ ಫಲವತ್ತಾದ ಹತ್ತುಸಾ

ವಿರ ಎಕರೆ ಭೂಮಿಯಿರುವುದು. ಈ ಕಟ್ಟಡವು ಅನೇಕ ಉಪ್ಪರಿಗೆಗಳು ಳ್ಳದ್ದಾಗಿದೆ. ಸುತ್ತಮುತ್ತಲೂ ಇರತಕ್ಕ ಬೆಟ್ಟಗಳನ್ನೂ, ಅಲ್ಲಿ ವಾಸವಾಗಿ ರತಕ್ಕ ದುಷ್ಟಮೃಗಗಳನ್ನೂ, ಮಧ್ಯೇ ಇರತಕ್ಕ ಈ ಕಟ್ಟಡವನ್ನೂ ನೋಡಿ ದರೆ, ನಗರವಾಸಿಗಳಾದ ಜನರಿಗೆ ಬಹಳ ಭಯವುಂಟಾಗುವುದು. ಈ ಅರ ಮನೆಯ ವಿಷಯದಲ್ಲಿ ಕೆಲವು ಕಥೆಗಳನ್ನು ಹೇಳುತ್ತಾರೆ. ಈ ಕಟ್ಟಡದಲ್ಲಿ ಅನೇಕ ನೆಲಮಾಳಿಗೆಗಳು ಇರುತ್ತವೆ. ಅಲ್ಲಿಗೆ ಹೋಗಿಬಂದವರು, ಈ ಕಟ್ಟಡದಲ್ಲಿ ಅನೇಕ ಪಿಶಾಚಿಗಳಿರುತ್ತವೆಯೆಂದೂ, ಮಧ್ಯಾಹ್ನವೇಳೆಯ ಲ್ಲಿಯೂ ಕೂಡ ಅತ್ಯಂತ ಭಯಂಕರವಾದ ಪಿಶಾಚಧ್ವನಿಗಳು ಅಲ್ಲಿ ಕೇಳಿಸು ತ್ತವೆಯೆಂದೂ, ಅಲ್ಲಿರತಕ್ಕ ಅದೃಶ್ಯವಾದ ಭೂತಾದಿಗಳು ಬಂದು ಕಡೆಯಲ್ಲಿ ರತಕ್ಕ ಮನುಷ್ಯರನ್ನು ದೂರವಾದ ಮತ್ತೊಂದು ಕಡೆಗೆ ತೆಗೆದುಕೊಂಡು ಹೋಗುತ್ತವೆಯೆಂದೂ, ಈ ಭೂತಗಳು ಒಂದೊಂದು ವೇಳೆಯಲ್ಲಿ ಮನು ಷ್ಯರ ದೃಷ್ಟಿಗೆ ಗೋಚರವಾಗುವುದುಂಟೆಂದೂ, ಇವುಗಳಲ್ಲಿ ಕೆಲವು ಮನು ಷ್ಯಮುಖವುಳ್ಳ ವ್ಯಾಘ್ರಗಳಾಗಿಯೂ ವ್ಯಾಘ್ರಮುಖವುಳ್ಳ ಮನುಷ್ಯರಾ ಗಿಯೂ ಹಾಗೆಯೇ ಕರಡಿ ಸಿಂಹ ಕೋತಿಗಳ ಮುಖವೂ ಶರೀರವೂ ಉಳ್ಳವಾಗಿಯೂ ಇರುವುವೆಂದೂ, ಇವುಗಳನ್ನು ನೋಡಿ ಅನೇಕರು ಭಯ ಪಟ್ಟು ಓಡಿಹೋಗಿ ಭೀತಿಯಿಂದ ಜ್ವರಾದಿಗಳು ಬಂದು ಸತ್ತಿರುವರೆಂದೂ ಹೇಳುವರು. ಇದು ವಾಸ್ತವವಾಗಿರಬಹುದು. ಪ್ರಥಮತಃ ಈ ಕಟ್ಟಡ ವನ್ನು ಕಟ್ಟಿಸಿದ ಚೋರನು ಬಹು ದುರಾತ್ಮನೆಂಬುದಾಗಿಯೂ, ಅನೇಕಲಕ್ಷ ಜನರನ್ನು ಹಿಡಿದು ಇಲ್ಲಿಗೆ ತಂದು ಅವರ ಸರ್ವಸ್ವವನ್ನೂ ಕಿತ್ತುಕೊಂಡು ಅವರಲ್ಲಿ ಅನೇಕರನ್ನು ಕೊಂದು ಸಮೀಪಭೂಮಿಗಳಲ್ಲಿಯೇ ಅವರನ್ನು ಹೂಳಿದನೆಂಬುದಾಗಿಯೂ, ಹೀಗೆ ಮೃತರಾದವರೆಲ್ಲರೂ ಪಿಶಾಚಗಳಾಗಿ ಆ ಕಟ್ಟಡದಲ್ಲಿ ವಾಸಮಾಡುತ್ತಾರೆಂಬುದಾಗಿಯೂ ಹೇಳುತ್ತಾರೆ. ಇದಲ್ಲದೆ, ಈ ಕಟ್ಟಡಕ್ಕೆ ರತ್ನಾಕರವೆಂಬ ಅಭಿಧಾನವೂ ಉಂಟಾಗಿದೆ. ಇದು ಅನ್ವರ್ಥ ನಾಮವೆಂದು ತೋರುತ್ತದೆ. ಈ ದುರ್ಗದ ಪ್ರಾಂತದಲ್ಲಿ ಚಿನ್ನದ ಗಣಿ ಗಳು ಅನೇಕವಾಗಿರುತ್ತವೆ; ಈ ಮನೆಯ ಕೆಳಗೆ ರತ್ನಗಳ ಗಣಿಗಳೂ ಇರುತ್ತವೆ. ಈ ಮನೆಯ ನೆಲಮಾಳಿಗೆಗಳಲ್ಲೊಂದರಕೆಳಗೆ, ವಿವಿಧ ರತ್ನ ಗಳನ್ನು ತೆಗೆದುಕೊಳ್ಳುವುದಕ್ಕೋಸ್ಕರ, ಒಂದು ಸುರಂಗವನ್ನು ಹೊಡೆದು,

ವಜ್ರ ಮೊದಲಾದ ಅಮೂಲ್ಯವಾದ ರತ್ನದ ಹಲ್ಲೆಗಳನ್ನು ಇಲ್ಲಿಂದ ತೆಗೆಯುತ್ತಾರೆಂಬ ಕಿಂವದಂತಿಯೂ ಇದೆ. ಮಾಧವನು, ಆಗಾಗ್ಗೆ ಅಮೂಲ್ಯವಾದ ವಜ್ರಗಳನ್ನು ವಿಕ್ರಯಿಸುತ್ತಿದ್ದನು. ಇವುಗಳೆಲ್ಲ ಈ ಗಣಿಗಳಿಂದ ತೆಗೆಯಲ್ಪಟ್ಟುವೆಂದು ನಂಬಬಹುದಾಗಿ ಕಿ. ಈ ಆಸ್ತಿಯು ನಿನಗೆ ಬಂದುದು, ಒಂದು ವಿಧದಲ್ಲಿ ಸಂತೋಷಜನಕವಾಗಿರುವುದು ; ಇನ್ನೊಂದು ವಿಧದಲ್ಲಿ ನಮಗೆಲ್ಲ ಭಯಾವಹವಾಗಿದೆ.

**ಪರಂತಪ**—ಮನುಷ್ಯರ ಮುಖವುಳ್ಳ ಹುಲಿ ಕರಡಿಗಳನ್ನು ನೀನು ನೋಡಿದ್ದೀಯಾ ?

**ಸತ್ಯಶರ್ಮ**—ನಾನು ಒಂದಾವೃತ್ತಿ ಹೋಗಿದ್ದೆನು. ಇವುಗಳ ದರ್ಶನವಾದ ಕೂಡಲೇ ನನಗೆ ಪ್ರಜ್ಞೆ ತಪ್ಪಿತು. ದೈವಾಧೀನದಿಂದ, ನನಗೆ ಮಿತ್ರರಾದ ಕೆಲವರು ನನ್ನನ್ನು ಈ ದುರ್ಗದಿಂದ ಹೊರಗೆ ಕರೆತಂದು ಬಿಟ್ಟರು.

**ಪರಂತಪ**—ಈಚೆಗೆ ಯಾರಾದರೂ ಹೋಗಿ ಈ ಕಟ್ಟಡವನ್ನು ನೋಡಿಕೊಂಡು ಬಂದಿದ್ದಾರೆಯೋ ?

**ಸತ್ಯಶರ್ಮ**—ನನಗೆ ತಿಳಿಯದು.

**ಪರಂತಪ**—ಈ ಕಟ್ಟಡಕ್ಕೆ ಸುತ್ತಲೂ ಫಲವತ್ತಾದ ಭೂಮಿಯು ಬಹಳವಿದೆಯೆಂದು ಹೇಳಿದೆಯಲ್ಲ ! ಇದು ಸಾಗುವಳಿಯಾಗಿದೆಯೊ ?

**ಸತ್ಯಶರ್ಮ**—ಈ ಕಟ್ಟಡಕ್ಕೆ ದೂರದಲ್ಲಿರುವ ಭೂಮಿಗಳನ್ನೆಲ್ಲ ಜನರು ಸಾಗುವಳಿಮಾಡುತ್ತಾರೆ. ಇದರ ಸಮೀಪದಲ್ಲಿ ಭೂಮಿಯು ಪಾಳುಬಿದ್ದಿದೆ.

ಹೀಗೆ ಮಾತನಾಡುತ್ತಿರುವೃದ್ಧರೊಳಗಾಗಿ, ಸತ್ಯವತಿಯೂ ಆರ್ಯಕೀರ್ತಿಯೂ ಕಾಮಮೋಹಿನಿಯೂ ಬೇರೆ ಕೊಠಡಿಗೆ ಹೋಗಿ, ವಿವಾಹಕ್ಕನುರೂಪವಾದ ಉಡುಗೆತೊಡುಗೆಗಳನ್ನು ಧರಿಸಿಕೊಂಡು, ಪುರೋಹಿತರನ್ನು ಕರೆಯಿಸಿ ಮುಹೂರ್ತವನ್ನು ನಿಶ್ಚಯಿಸಿಕೊಂಡು, ಮಂಗಳದ್ರವ್ಯವನ್ನು ಸಿದ್ಧಪಡಿಸಿಕೊಂಡು, ತಮ್ಮ ಕಾರ್ಯಗಳನ್ನು ಸತ್ಯಶರ್ಮನಿಗೆ ತಿಳಿಸಿದರು.

**ಸತ್ಯಶರ್ಮ**—ಅಯ್ಯಾ ! ಪರಂತಪ ! ಸತ್ಯವತಿ ಮೊದಲಾದವರು, ಈ ದಿನ ನಿನಗೆ ಕಾಮಮೋಹಿನಿಯನ್ನು ಕೊಟ್ಟು ವಿವಾಹ ಮಹೋತ್ಸವವನ್ನು ನೆರವೇರಿಸಬೇಕೆಂದು ಸಿದ್ಧರಾಗಿರುತ್ತಾರೆ. ಇದಕ್ಕೆ ಏನುಹೇಳುತ್ತೀಯೆ ?

**ಪರಂತಪ**—ಇದು ಅಸಾಧ್ಯ. ಈ ಪಟ್ಟಣದಲ್ಲಿ ನಾನು ಬಂಧುಮಿತ್ರರೊಬ್ಬರೂ ಇಲ್ಲದೆ ಒಬ್ಬನೇ ಬಂದಿರುತ್ತೇನೆ. ನಿಲ್ಲುವುದಕ್ಕೆ ಮನೆಯಿಲ್ಲ; ಬೇಕಾದ ಸಾಮಗ್ರಿಗಳಿಲ್ಲ. ಶತ್ರುಗಳ ಮಧ್ಯದಲ್ಲಿರುತ್ತೇನೆ. ಹೀಗೆ ದುಡುಕುವುದು ಸರಿಯಲ್ಲ.

**ಸತ್ಯಶರ್ಮ**—ವಿವಾಹಕ್ಕೆ ಇವುಗಳಾವುವೂ ಆವಶ್ಯಕವಿಲ್ಲ. ಸಂಕಲ್ಪವೇ ಮುಖ್ಯವಾದುದು. ಕಾಮಮೋಹಿನಿಯು, ದೈವಪ್ರೇರಣೆಯಿಂದ ನಿನ್ನನ್ನು ವರಿಸಿರುವಳು. ನೀನು ವಿವಾಹಮಾಡಿಕೊಳ್ಳದಿದ್ದರೆ, ಅವಿವಾಹಿತಳೆಂದು ಇತರರು ಇವಳನ್ನು ಪರಿಗ್ರಹಿಸುವುದಕ್ಕೆ ಅವಕಾಶವಾಗುವುದು; ಒಂದುವೇಳೆ ಸುಮಿತ್ರ ಶಂಬರರು ಈಕೆಯನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋಗಿ ಶಂಬರನಿಗೆ ವಿವಾಹಮಾಡಿಕೊಳ್ಳುವುದಕ್ಕೂ ಅವಕಾಶವಾಗುವುದು. ನಿನಗೆ ವಿವಾಹವಾಯಿತೆಂದು ತಿಳಿದರೆ, ಇವರು ಈ ರೀತಿಯಲ್ಲಿ ಮಾಡುವುದಕ್ಕೆ ಪ್ರತಿಬಂಧಕವಾಗುವುದು.

**ಪರಂತಪ**—ನೀನು ಹೇಳುವುದೆಲ್ಲ ಸತ್ಯವಾದಾಗ್ಯೂ, ಈಗ ವಿವಾಹಕ್ಕೆ ಸಮಯವಲ್ಲ. ಈ ಪ್ರಯತ್ನವನ್ನು ಮಾನಸಿಕವಾಡಬೇಕು.

ಹೀಗೆ ಹೇಳುತ್ತಿರುವಾಗ, ಸತ್ಯವತಿಯು ಅಲ್ಲಿಗೆ ಬಂದು "ಎಲೈ ಪರಂತಪನೆ! ನೀನು ವಿದ್ವಾಂಸನು; ಪೂರ್ವಾಪರಜ್ಞನು; ಊಹಾಪೋಹಗಳನ್ನು ತಿಳಿಯದವನಲ್ಲ. ನಮ್ಮ ಮಾತುಗಳನ್ನು ನೀನು ಈಗ ಉಲ್ಲಂಘಿಸಿದರೆ, ಕಾಮಮೋಹಿನಿಯು ಶಂಬರನ ಪಾಲಾಗುವಳು; ಕೂತಲೆ ಯಮನ ಪಾಲಾಗುವುದಕ್ಕೆ ಸಂದೇಹವಿಲ್ಲ. ಇದರಿಂದ ಉಂಟಾಗುವ ಅನರ್ಥಗಳಿಗೆ ನೀನೇ ಕಾರಣನಾಗುವೆ. ಸುಮಿತ್ರ ಶಂಬರರು, ಈಕೆಯನ್ನು ಪತ್ತೆಮಾಡುವುದಕ್ಕೆ ಜನರನ್ನು ಬಿಟ್ಟಿದ್ದಾರೆ. ನಾಳೆಯೋ—ನಾಡಿದ್ದೋ ಈಕೆಯನ್ನು ಪತ್ತೆಮಾಡುವರು. ವಿವಾಹವಾಗಿದ್ದ ಪಕ್ಷದಲ್ಲಿ ಭಯವೇನೂ ಇರುವುದಿಲ್ಲ ನಮ್ಮ ಮಾತುಗಳನ್ನು ಉಲ್ಲಂಘಿಸಬೇಡ. ಮಂಗಳಸ್ನಾನಕ್ಕೆ ಏಳು" ಎಂದಳು.

**ಆರ್ಯಕೀರ್ತಿ**—ಎಲೈ ಪರಂತಪನೆ! ನಮ್ಮ ತಾಯಿ ಹೇಳತಕ್ಕುದನ್ನು ಕೇಳು. ಈ ಅನಾಥಳಾದ ನನ್ನ ಸಖಿಗೆ ನಾಥನಾಗು. ಈಗ ನೀನು ಉದಾಸೀನಮಾಡಿದರೆ, ನನ್ನ ಸಖಿಯು ಶಂಬರನ ಕೈವಶವಾಗುವುದನ್ನು

ಬಿಟ್ಟು ಯಮುನ ಅತಿಥಿಯಾಗುವುದಕ್ಕೆ ಸಿದ್ಧಳಾಗುವಳು; ನನ್ನ ಪ್ರಿಯಸಖಿಯನ್ನು ನಾನು ಅನುಸರಿಸದೆ ಇರಲಾರೆನು; ನನ್ನ ಮಾತಾಪಿತೃಗಳು ನನ್ನನ್ನೇ ಅನುಸರಿಸುವುದಕ್ಕೆ ಸಂಶಯವಿಲ್ಲ. ಈ ಪಾತಕಗಳಿಗೆಲ್ಲ ನೀನೇ ಕಾರಣಭೂತನಾಗುವೆ. ಆದುದರಿಂದ ಸಾವಕಾಶಮಾಡಬೇಡ. ಮಂಗಳಸ್ನಾನಕ್ಕೆ ಏಳು; ಹೋಗೋಣ-ಏಳು.

ಪರಂತಪ-(ಸ್ವಗತ) ಈ ಆರ್ಯಕೀರ್ತಿಯೂ ಇವಳ ತಂದೆ ತಾಯಿಗಳೂ ಹೇಳುವ ಮಾತುಗಳೆಲ್ಲ ಸತ್ಯವಾಗಿ ಕಾಣುತ್ತವೆ. ಸುಮಿತ್ರ ಶಂಬರರು, ಪ್ರಬಲರಾಗಿಯೂ ಧನಿಕರಾಗಿಯೂ ಇದ್ದಾರೆ. ಶಂಬರನು, ಸರ್ವಪ್ರಯತ್ನದಿಂದಲೂ ಈಕೆಯನ್ನು ಮದುವೆಮಾಡಿಕೊಳ್ಳಬೇಕೆಂದು ಇದ್ದಾನೆ. ಈಕೆಯಾದರೋ, ಶಂಬರನಲ್ಲಿ ಸ್ವಲ್ಪವೂ ಅನುರಕ್ತಳಾಗಿಲ್ಲ. ಬಲಾತ್ಕಾರದಿಂದ ಆತನಿಗೆ ವಿವಾಹಮಾಡಲ್ಪಟ್ಟರೆ, ಇವಳು ದೇಹವನ್ನು ಬಿಡುವುದರಲ್ಲಿ ಸಂದೇಹ ತೋರುವುದಿಲ್ಲ. ಇಷ್ಟು ಅನರ್ಥಗಳಿಗೂ ನಾನೇ ಕಾರಣಭೂತನಾದೇನು. ನಾನು ಈ ಸುಮಿತ್ರನ ಮನೆಗೆ ಬಾರದೇ ಇದ್ದಿದ್ದರೆ, ಬಹುಶಃ ಇವಳು ಶಂಬರನಿಗೆ ಘಟನೆಯಾಗುತ್ತಿದ್ದಳೋ ಏನೋ-ತಿಳಿಯದು. ಈಗ ಕೆಲಸ ಮಿಾರಿತು. ಈಕೆಯನ್ನು ಈಗ ವಿವಾಹಮಾಡಿಕೊಂಡರೆ, ನಾನು ಸುಮಿತ್ರ ಶಂಬರರಿಗೆ ವಿರೋಧಿಯಾಗುವುದಲ್ಲದೆ, ಜನರ ಅಪವಾದಕ್ಕೂ ಗುರಿಯಾಗುತ್ತೇನೆ. ವಿವಾಹಮಾಡಿಕೊಳ್ಳದಿದ್ದರೆ, ನನ್ನಲ್ಲಿ ಅನುರಕ್ತಳಾದ ಇವಳನ್ನು ಶಂಬರನು ಆಸುರವಿವಾಹದಿಂದ ಪರಿಗ್ರಹಿಸುವನು. ಕೂಡಲೆ ಇವಳು ದೇಹತ್ಯಾಗವನ್ನು ಮಾಡುವಳು. ಮಾಧವನು ಉತ್ಕ್ರಮಣ ಕಾಲದಲ್ಲಿ ಹೇಳಿದಮಾತು ನಿಜವಾಯಿತು. ಅಪ್ರಾರ್ಥಿತವಾಗಿ ತನ್ನನ್ನು ಧರ್ಮಪತ್ನಿಯಾಗಿ ಪರಿಗ್ರಹಿಸೆಂದು ಪ್ರಾರ್ಥಿಸತಕ್ಕ ಬಾಲೆಯನ್ನು ನಿರಾಕರಿಸುವುದು ಧರ್ಮವಾಗಿಲ್ಲ. ಇದಲ್ಲದೆ, ಈಕೆಯು ಅನಾಥಳು; ನನ್ನನ್ನು ನಾಥನನ್ನಾಗಿಯೂ, ಪತಿಯನ್ನಾಗಿಯೂ ವರಿಸಿ ಇದ್ದಾಳೆ. ಈ ಆರ್ಯಕೀರ್ತಿ ಮೊದಲಾದವರು, ಈ ಪ್ರಾರ್ಥನೆಯನ್ನು ವಿಶೇಷವಾಗಿ ಅನುಮೋದಿಸುತ್ತಲಿದ್ದಾರೆ. ಇವಳನ್ನು ವಿವಾಹಮಾಡಿಕೊಳ್ಳುವುದು, ಅನೇಕ ಅಪಾಯಗಳಿಗೆ ಆಸ್ಪದವಾಗುತ್ತದೆ. ಆದರೂ ಚಿಂತೆಯಿಲ್ಲ. ಹಿರಿಯರಾದ ಸತ್ಯವತೀ ಸತ್ಯಶರ್ಮರ ಪ್ರಾರ್ಥನೆಯನ್ನು ಉಲ್ಲಂಘಿಸುವುದು ಧರ್ಮವಲ್ಲ. ಬಂದ ಕಷ್ಟ

ಗಳನ್ನೆಲ್ಲ ಅನುಭವಿಸಲೇಬೇಕು. ನಾನು ಸತ್ಯವಂತನಾಗಿದ್ದರೆ, ಈಶ್ವರನೇ ನನ್ನನ್ನು ರಕ್ಷಿಸಲಿ. ಆತನಮೇಲೆ ಭಾರವನ್ನು ಹಾಕಿ, ಇವರ ಇಷ್ಟಕ್ಕನು ಸಾರವಾಗಿ ನಡೆದುಕೊಳ್ಳುತ್ತೇನೆ. ಎಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು, ಸತ್ಯಶರ್ಮಾದಿಗಳನ್ನು ಕುರಿತು "ಎಲೈ ಸತ್ಯವತೀ ಸತ್ಯಶರ್ಮರೆ! ಎಲೈ ಆರ್ಯ ಕೀರ್ತಿಯೇ! ನಿಮ್ಮ ಪ್ರಾರ್ಥನೆಗೆ ಪ್ರತಿ ಹೇಳುವುದಕ್ಕೆ ನನಗೆ ಮನಸ್ಸು ಬರುವುದಿಲ್ಲ. ಈ ವಿವಾಹದಿಂದ ಉಂಟಾಗುವ ಅನರ್ಥಗಳನ್ನು ಈಶ್ವರನು ತಪ್ಪಿಸಬೇಕು. ನಿಮ್ಮ ಇಷ್ಟಪ್ರಕಾರ ನಡೆಯುವುದಕ್ಕೆ ಸಿದ್ಧನಾಗಿದ್ದೇನೆ" ಎಂದು ಹೇಳಿದನು.

ಸತ್ಯವತೀ, ಸತ್ಯಶರ್ಮ, ಆರ್ಯಕೀರ್ತಿಗಳು—"ಧರ್ಮಪ್ರವರ್ತಕರಾದವರಿಗೆ ಬರತಕ್ಕ ಅನರ್ಥಗಳನ್ನು ತಪ್ಪಿಸುವುದಕ್ಕೆ ಈಶ್ವರನು ಬದ್ಧಸಂಕಲ್ಪನಾಗಿರುವನು. ಈ ವಿಷಯದಲ್ಲಿ ವಿಚಾರಪಡಬೇಡ." ಎಂದು ಹೇಳಿ, ಕಾಮಮೋಹಿನೀ ಪರಂತಪರಿಗೆ ಮಂಗಳಸ್ನಾನವನ್ನು ಮಾಡಿಸಿ, ಅನೇಕ ಬ್ರಾಹ್ಮಣ ಸುಮಂಗಲಿಯರನ್ನು ಕರೆದುಕೊಂಡು, ಮಂಗಳವಾದ್ಯಪುರಸ್ಸರವಾಗಿ ಸಮೀಪದಲ್ಲಿರುವ ಈಶ್ವರ ದೇವಸ್ಥಾನಕ್ಕೆ ಹೋಗಿ, ವಿವಾಹಮಹೋತ್ಸವವನ್ನು ನೆರವೇರಿಸಿದರು. ವಧೂವರರಿಬ್ಬರೂ, ಬ್ರಾಹ್ಮಣ ಸುಮಂಗಲಿಯರ ಇದುರಿಗೆ, ಅಗ್ನಿಸಾಕ್ಷಿಯಾಗಿ, ದೇವರ ಸಾನ್ನಿಧ್ಯದಲ್ಲಿ, ಧರ್ಮಾರ್ಥಕಾಮ ವಿಚಾರಗಳಲ್ಲಿ ವ್ಯಭಿಚರಿಸಿ ನಡೆಯುವುದಿಲ್ಲವೆಂದು ಪ್ರತಿಜ್ಞೆಮಾಡಿದರು. ಕಾಮಮೋಹಿನಿಗೂ ಪರಂತಪನಿಗೂ ವಿವಾಹಮಹೋತ್ಸವವು ಈರೀತಿಯಲ್ಲಿ ಪೂರಯಿಸಿತು.

## ಪರಿಚ್ಛೇದ. ೭.

ಪರಂತಪನು ಸುಮಿತ್ರನ ಮನೆಯಿಂದ ಹೊರಟುಹೋದಕೂಡಲೆ, ಸುಮಿತ್ರನು ಸ್ವಲ್ಪಹೊತ್ತು ಮುಂದೆ ಮಾಡತಕ್ಕ ಕಾರ್ಯವನ್ನು ಯೋಚಿಸಿ, ಕಾಮಮೋಹಿನಿಯ ಪತ್ತೆಗಾಗಿ ಇನ್ನೂ ಕೆಲವು ಜನಗಳನ್ನು ಕಳುಹಿಸಿ, ಅಲ್ಲಿಂದ ಶಂಬರನ ಬಳಗೆ ಹೋದನು. ಶಂಬರನು ಅತ್ಯಂತ ವ್ಯಾಕುಲತೆಯಿಂದ ಸಂತಪಿಸುತ್ತಿದ್ದನು.

**ಸುಮಿತ್ರ**—ಎಲೈ ಶಂಬರನೆ! ನಿನ್ನ ಸಂತಾಪವನ್ನು ನೋಡಿದರೆ ನನಗೆ ಬಹಳ ವ್ಯಸನವಾಗುತ್ತದೆ. ಕಾಮಮೋಹಿನಿಯು ಮೊದಲಿಂದಲೂ ನಿನ್ನಲ್ಲಿ ಅನುರಕ್ತಳಾಗಿರಲಿಲ್ಲ. ಅವಳಲ್ಲಿ ನಿನಗಿದ್ದ ಅಭಿಮಾನವನ್ನುನೋಡಿ, ನಿಮ್ಮಿಬ್ಬರಿಗೂ ಘಟನೆ ಮಾಡಬೇಕೆಂದು ನಾನು ಬಹಳ ಪ್ರಯತ್ನಪಟ್ಟೆನು. ಇದೆಲ್ಲ ನಿಷ್ಫಲವಾಯಿತು.

**ಶಂಬರ**—ಎಂದಿಗೂ ನಿಷ್ಫಲವಾಗುವುದಿಲ್ಲ. ಪರಂತಪನನ್ನು ನೋಡಿ ಅವಳು ನನ್ನನ್ನು ತಿರಸ್ಕಾರಮಾಡಿದ್ದಾಳೆ. ಇವನನ್ನು ಹಿಡಿದು ಕಾರಾಗೃಹ ದಲ್ಲಾದರೂ ಇಡುತ್ತೇನೆ; ಅಥವಾ ಯಮಪುರಿಗಾದರೂ ಕಳುಹಿಸುತ್ತೇನೆ. ಕೂಡಲೇ ಅವಳು ವಿನೀತಳಾಗುವಳು.

**ಸುಮಿತ್ರ**—ಇದು ಅಸಾಧ್ಯ. ಪರಂತಪನು ಸಾಮಾನ್ಯನಲ್ಲ. ಇವನ ಬುದ್ಧಿಯೂ, ಶಕ್ತಿಯೂ, ಊಹಾಪೋಹಜ್ಞಾನವೂ ಅಸಾಧಾರಣವಾಗಿರು ವುವು. ಇವನ ಗುಣಾತಿಶಯಗಳೂ ಹಾಗೆಯೇ. ಇವನನ್ನು ನೋಡಿ ದವರೂ, ಇವನ ಸಂಗಡ ಸಂಭಾಷಣೆಯನ್ನು ಮಾಡಿದವರೂ ಸಹ, ಇವ ನಲ್ಲಿ ಅತ್ಯಂತ ವಿಶ್ವಾಸಪಡುತ್ತಾರೆ. ಇವನನ್ನು ಪ್ರತಿಭಟಿಸಿದರೆ, ನಮ್ಮ ಪರಿ ಣಾಮ ಹೇಗಾಗುವುದೋ ಕಾಣೆನು.

**ಶಂಬರ**—ಯಾರಿಗೂ ತಿಳಿಯದಂತೆ ಇವನನ್ನು ಹಿಡಿದು ಕಾರಾಗೃಹ ದಲ್ಲಿಡುವೆನು. ಮರಣಾವಧಿ ಬಿಡುವುದಿಲ್ಲ.

**ಸುಮಿತ್ರ**—ನೀನು ಲೋಕವ್ಯವಹಾರಜ್ಞನಲ್ಲ. ಪ್ರಪಂಚದಲ್ಲಿ ನಾವು ಒಂದುವಿಧವಾಗಿ ಯೋಚಿಸುತ್ತಿದ್ದರೆ, ಅದು ನೆರವೇರದಂತೆ ಮಾಡುವುದಕ್ಕೆ ದೈವವು ಯೋಚಿಸುತ್ತಿರುವುದು. ಕೊನೆಗೆ "ಯತೋಧರ್ಮಸ್ತತೋಜಯಃ" ಎಂಬಂತೆ, ಧರ್ಮವಿದ್ದಕಡೆ ಜಯವುಂಟಾಗುವುದು ನಾವು ಮಾಡಿದ ಅನೇಕ ಅಧರ್ಮಗಳ ಫಲವನ್ನು ಈ ಜನ್ಮದಲ್ಲಿ ಅನುಭವಿಸುತ್ತಿರುವೆವು. ಈರೀತಿ ಯನ್ನು ತಿಳಿದೂ, ಪುನಃ ಅಧರ್ಮದಲ್ಲಿ ಪ್ರವರ್ತಿಸಬಹುದೆ?

**ಶಂಬರ**—ಈ ವೈದಿಕೋಕ್ತಿಗಳಿಂದ ಪ್ರಯೋಜನವಿಲ್ಲ. ಕಾರ್ಯಸಾಧ ನೆಗಾಗಿ ಪ್ರವರ್ತಿಸತಕ್ಕವರು ವೈದಿಕೋಕ್ತಿಗಳಿಗೆ ಕಿವಿಗೊಟ್ಟರೆ, ಅವರಿಗೆ ಯಾವ ಕಾರ್ಯವೂ ಕೈಗೂಡುವುದಿಲ್ಲ. ನಿನ್ನ ಧರ್ಮೋಪದೇಶಗಳು, ಪುರಾಣ

ಕಾಲಕ್ಕೆ ತಕ್ಕುವುಗಳಾಗಿರುವುವು. ನನಗೆ ತೋರಿದರೀತಿಯಲ್ಲಿ ನಾನು ನಡೆಸು ತ್ತೇನೆ. ಈ ವಿಷಯದಲ್ಲಿ ನಿನ್ನ ಧರ್ಮೋಪದೇಶಗಳನ್ನು ಕೇಳತಕ್ಕವನಲ್ಲ.

**ಸುಮಿತ್ರ.**—ಯಾವ ಕೆಲಸವನ್ನು ಮಾಡಬೇಕಾದರೂ, ಪೂರ್ವಭಾವಿ ಯಾಗಿಯೇ ಪರಿಣಾಮವನ್ನು ಯೋಚಿಸಬೇಕು. ಹಾಗಿಲ್ಲದಿದ್ದರೆ, ಅನರ್ಥ ವುಂಟಾಗುವುದೇ ನಿಜ. ಅದು ಹಾಗಿರಲಿ; ಈ ಪರಂತಪನು ಸಾಮಾ ನ್ಯನಲ್ಲ. ದುಷ್ಟರನ್ನು ಹೇಗಾದರೂ ಅಡಗಿಸುವನು. ಮಾಧವನು, ಈತ ನಲ್ಲಿ ಪುತ್ರವಾತ್ಸಲ್ಯದಿಂದ ತನ್ನ ಸರ್ವಸ್ವವನ್ನೂ ಈತನಿಗೇ ಕೊಟ್ಟಿರು ವನು. ಅವನು ಬರೆದ ಉಯಿಲಿನಂತೆ, ಈ ಆಸ್ತಿಯನ್ನೆಲ್ಲ ಸ್ವಾಧೀನ ಪಡಿಸಿಕೊಳ್ಳುವುದಕ್ಕಾಗಿ ಈತನು ಇಲ್ಲಿಗೆ ಬಂದಿರುವನು. ನಿನಗೂ ಕಾಮಮೋಹಿನಿಗೂ ವಿವಾಹವಾದಮೇಲೆ ಈ ಸಂಗತಿಯನ್ನು ತಿಳಿಯಿಸಬೇ ಕೆಂದು ನಿಶ್ಚಯಿಸಿದ್ದನು; ಇದಕ್ಕೆ ಅವನೂ ಒಪ್ಪಿದ್ದನು. ಇದಲ್ಲದೆ, ಇನ್ನೊಂದು ರಹಸ್ಯವುಂಟು. ಇವನು ಕೈಪೆಟ್ಟಿಗೆಯನ್ನು ತೆಗೆದಾಗ, ದೊಡ್ಡ ಮೊಹರುಳ್ಳ ಒಂದು ಕಾಗದವು ಕಾಣಬಂದಿತು. ಅದನ್ನು ಮಾತ್ರ ಮರೆಸಿ, ಉಯಿಲು ಮೊದಲಾದುವುಗಳನ್ನೆಲ್ಲ ತೋರಿಸಿದನು. ಆದಿನ ರಾತ್ರಿಯೇ ಈತನು ನಿದ್ದೆಮಾಡುವ ಕಾಲದಲ್ಲಿ ಬೇರೆ ಬೀಗದ ಕೈಯನ್ನು ತಂದು ಆ ಕಾಗದವನ್ನು ಪರೀಕ್ಷಿಸಿದೆನು. ಇವನು ದುಷ್ಟನಿಗ್ರಹದ ವಿಷಯದಲ್ಲಿ ಸರ ಕಾರದಿಂದ ಸರ್ವಾಧಿಕಾರವನ್ನು ಹೊಂದಿರುವನೆಂದು ಆ ಕಾಗದದಿಂದ ಗೊತ್ತಾಯಿತು. ಇಂಥವನಮೇಲೆ ಪ್ರತಿಭಟಿಸುವುದು ಉಚಿತವಲ್ಲ.

ಈ ಮಾತನ್ನು ಕೇಳಿದಕೂಡಲೆ, ಶಂಬರನು ಚಿಂತಾಪರವಶನಾಗಿ ಮೂರ್ಛೆಬಿದ್ದು, ಶೈತ್ಯೋಪಚಾರಗಳಿಂದ ಪ್ರಜ್ಞೆಯನ್ನು ಹೊಂದಿ, ಸುಮಿ ತ್ರನನ್ನು ಕುರಿತು 'ಅಯ್ಯೋ! ಸರ್ವಪ್ರಕಾರದಿಂದಲೂ ನಾನು ಕೆಟ್ಟೆನು. ಮಾಧವನಿಗೆ ಹಕ್ಕುದಾರನೆಂದೂ, ಅವನ ಐಶ್ವರ್ಯವೆಲ್ಲ ನನ್ನದೆಂದೂ ತಿಳಿ ದಿದ್ದೆನು. ಅದೆಲ್ಲವೂ ಪರಾಧೀನವಾಯಿತು. ಕಾಮಮೋಹಿನಿಯಾದರೂ ದೊರಕಬಹುದೆಂದಿದ್ದೆನು. ಇವಳೂ ಪರಾಧೀನಳಾದಳು. ನಾನು ಬಹು ನಿರ್ಭಾಗ್ಯನು. ಇನ್ನು ನಾನು ಜೀವಿಸಿರಬಾರದು. ಈ ಕ್ಷಣವೇ ಪರಂ ತಪನನ್ನು ಯಾವ ವಿಧದಿಂದಲಾದರೂ ಕೊಂದು, ಮಾಧವನ ಐಶ್ವರ್ಯವನ್ನೂ ಕಾಮಮೋಹಿನಿಯನ್ನೂ ಹೊಂದುವ ಪ್ರಯತ್ನವನ್ನು ಮಾಡುವೆನು;

ಅಥವಾ, ಈ ಪ್ರಯತ್ನದಲ್ಲಿಯೇ ಪ್ರಾಣವನ್ನಾದರೂ ಬಿಡುವೆನು." ಎಂದು ಹೇಳಿದನು.

**ಸುಮಿತ್ರ**—ಅಯ್ಯಾ! ಪುತ್ರನೇ! ದುಡುಕಬೇಡ; ದುಡುಕಬೇಡ. ಮಾಧವನ ಆಸ್ತಿಯೂ ಹೋಗಲಿ; ಕಾಮಮೋಹಿನಿಯೂ ಹೋಗಲಿ. ನನಗೆ ಗಂಡುಮಕ್ಕಳಿಲ್ಲ. ನನ್ನ ಸ್ವತ್ತಿಗೆಲ್ಲ ನೀನೇ ಬಾಧ್ಯನಾಗಿರು. ನನ್ನ ಸೋದರಸೊಸೆಯಾದ ಕಲಾವತಿಗೆ ನಿನ್ನಲ್ಲಿ ಅನುರಾಗವುಂಟಾಗುವಂತೆ ಮಾಡಿರುತ್ತೇನೆ. ನನ್ನ ಆಸ್ತಿಯನ್ನೆಲ್ಲ ಅವಳ ಹೆಸರಿಗೆ ಉಯಿಲುಬರೆದಿರುತ್ತೇನೆ. ಅವಳನ್ನು ಪರಿಗ್ರಹಿಸಿ, ನನ್ನ ಆಸ್ತಿಯನ್ನೆಲ್ಲ ಅನುಭವಿಸಿಕೊಂಡು ಸುಖವಾಗಿ ಬಾಳು. ಪ್ರಬಲರಲ್ಲಿ ವಿರೋಧವನ್ನು ಬೆಳೆಸಬೇಡ.

**ಶಂಬರ**—ನನ್ನಭಾಗಕ್ಕೆ, ನನ್ನತಂದೆಯ ಸಹೋದರರಾದ ನೀವಿಬ್ಬರೂ ಮಿತ್ರರಾಗಿ ಪರಿಣಮಿಸಲಿಲ್ಲ. ಮಾಧವನು, ತನ್ನ ಆಸ್ತಿಯನ್ನೆಲ್ಲ ಅಜ್ಞಾತ ಕುಲಗೋತ್ರನಾದ ಪರಂತಪನಿಗೆ ಒಪ್ಪಿಸಿದನು. ನೀನು ನಿನ್ನ ಆಸ್ತಿಯನ್ನೆಲ್ಲ ಕಲಾವತಿಗೆ ಕೊಟ್ಟೆ. ನನ್ನ ತಂದೆಯಾದರೋ, ನನಗೆ ಅನ್ನವಸ್ತ್ರಗಳಿಗೂ ಗತಿಯಿಲ್ಲದಂತೆ, ತನ್ನ ಸರ್ವಸ್ವವನ್ನೂ ದ್ಯೂತ ವ್ಯಭಿಚಾರಗಳಲ್ಲಿ ಕಳೆದು, ಅಕಾಲಮರಣವನ್ನು ಹೊಂದಿ, ನನ್ನ ಭಾಗಕ್ಕೆ ಶತ್ರುವಾಗಿ ಪರಿಣಮಿಸಿದನು. ನಿನ್ನ ವಂಶದಲ್ಲಿ ಹುಟ್ಟಿದ ನನಗೆ ಈರೀತಿ ನಿರ್ಗತಿಯಾಯಿತು. ಕಲಾವತಿಯಲ್ಲಿ ನನಗೆ ಅನುರಾಗವಿಲ್ಲ. ನಿನ್ನ ಆಸ್ತಿಯೂ ನನಗೆ ಆವಶ್ಯಕವಿಲ್ಲ. ನನ್ನ ಮನಸ್ಸಿಗೆ ತೋರಿದಂತೆ ನಾನು ನಡೆದುಕೊಳ್ಳುವೆನು.

**ಸುಮಿತ್ರ**—ಎಲೈ ಶಂಬರನೆ! ದುಡುಕಬೇಡ; ದುಡುಕಬೇಡ. ನಿಧಾನಿಸು. ಮಾಧವನು ಮಾಡಿದ ಕೆಲಸವು ಪೂರಯಿಸಿಹೋಯಿತು. ಅವನ ಆಸ್ತಿಯು ಪುನಃ ನಿನಗೆ ಸೇರಲಾರದು. ಆದರೆ, ನಾನು ನನ್ನ ಆಸ್ತಿ ನನ್ನ ಜೀವನಾನಂತರ ಕಲಾವತಿಗೆ ಸೇರತಕ್ಕುದೆಂದು ಉಯಿಲು ಬರೆದಿರುತ್ತೇನೆ. ಈ ಸಂಗತಿ ಅವಳಿಗೆ ಚೆನ್ನಾಗಿ ತಿಳಿಯದು. ಅವಳನ್ನು ನೀನು ಮದುವೆ ಮಾಡಿಕೊಂಡಪಕ್ಷದಲ್ಲಿ, ಈ ವುಯಿಲನ್ನು ರದ್ದುಮಾಡಿ, ನಿನ್ನನ್ನೇ ನನ್ನ ಆಸ್ತಿಗೆಲ್ಲ ಬಾಧ್ಯನನ್ನಾಗಿ ಮಾಡುತ್ತೇನೆ. ಚಿಂತಿಸಬೇಡ; ಚೆನ್ನಾಗಿ ಪರ್ಯಾಲೋಚಿಸು.

**ಶಂಬರ**—ನಾನು, ಪರಂತಪನಿಗೆ ಪ್ರತೀಕಾರವನ್ನು ಮಾಡದೆ ಎಂದಿಗೂ ಬಿಡತಕ್ಕವನಲ್ಲ. ನಾಳೆಯೇ ಅವನನ್ನು ಕಲಹಕ್ಕಾಗಿ ಕರೆದು, ಅವನೊಡನೆ ಯುದ್ಧವನ್ನು ಮಾಡುವೆನು. (ಪೂರ್ವಕಾಲದಲ್ಲಿ, ವಾದಿ ಪ್ರತಿವಾದಿಗಳಲ್ಲಿ ನ್ಯಾಯವು ಯಾರ ಪಕ್ಷವಾಗಿದೆಯೆಂಬುದನ್ನು ಪರೀಕ್ಷಿಸುವುದಕ್ಕಾಗಿ, ಇಬ್ಬರು ಪಂಚಾಯಿತರಮುಂದೆ ದ್ವಂದ್ವಯುದ್ಧವನ್ನು ಮಾಡಿ ಅದರಲ್ಲಿ ಗೆದ್ದವನ ಪಕ್ಷವು ನ್ಯಾಯವೆಂದೂ ಸೋತವನದು ಅಧರ್ಮವೆಂದೂ ನಿರ್ಣಯಿಸುತ್ತಿದ್ದರು)

**ಸುಮಿತ್ರ**—ಇದು ಅಪಾಯಕರವಾದುದು. ನೀನು ಬಲಿಷ್ಠನಾದರೂ ಅವನನ್ನು ಸೋಲಿಸಲಾರೆ. ಹಾಗೂ ಆಗಲಿ ; ನೀನು ಯಾವ ರೀತಿಯಲ್ಲಿ ಅವನನ್ನು ಸೋಲಿಸಬೇಕೆಂದು ಯೋಚಿಸಿರುತ್ತೀಯೆ ?

**ಶಂಬರ**—ಪಿಸ್ತೂಲಿನಿಂದ ಸುಟ್ಟು ಅವನನ್ನು ಕೊಂದುಬಿಡುವೆನು.

**ಸುಮಿತ್ರ**—ಪಿಸ್ತೂಲನ್ನು ಉಪಯೋಗಿಸುವುದರಲ್ಲಿ ಅವನಿಗಿಂತ ನೀನು ಸಮರ್ಥನೋ ?

**ಶಂಬರ**—ಅವನುಮಾತ್ರವೇ ಅಲ್ಲ. ಈ ವಿಷಯದಲ್ಲಿ ಯಾರೂ ನನಗೆ ಎದುರಿಲ್ಲ.

**ಸುಮಿತ್ರ**—ಪರಂತಪನು ಸರಕಾರದಿಂದ ಹೊಂದಿರುವ ಸನ್ನದಿನ ವಿಷಯವನ್ನು ನಾನು ಮೊದಲೇ ತಿಳಿಸಿರುತ್ತೇನಷ್ಟೆ ! ನಾನಾವಿಧವಾದ ಆಯುಧಗಳ ಉಪಯೋಗದಲ್ಲಿ ಅದ್ವಿತೀಯವಾದ ಪಾಂಡಿತ್ಯವಿದ್ದ ಹೊರತು, ಇಂಥ ಅಧಿಕಾರವನ್ನು ಎಂದಿಗೂ ಕೊಡಲಾರರು.

**ಶಂಬರ**—ಅವನು ಒಳ್ಳೆಯ ಪಂಡಿತನಾಗಿಯೇ ಇರಬಹುದು ; ಆದರೆ ನನ್ನ ಸಾಮರ್ಥ್ಯವೂ ಸರಕಾರದವರಿಗೆ ಚೆನ್ನಾಗಿ ತಿಳಿದಿರುವುದು. ಅವನಿಗಿಂತಲೂ ಹೆಚ್ಚಾದ ಅಧಿಕಾರವನ್ನು ಸರಕಾರದವರು ಕಾಲಕ್ರಮೇಣ ನನಗೂ ಕೊಡಬಹುದು.

**ಪರಂತಪ**—ಎಷ್ಟು ಹೇಳಿದರೇನು ? ಪರಂತಪನಕಡೆಗೆ ನ್ಯಾಯವಿರುವುದು. ಉಯಿಲಿನಪ್ರಕಾರ ಅವನು ಮಾಧವನ ಆಸ್ತಿಯನ್ನು ಅಪೇಕ್ಷಿಸುವನು. ಕಾಮಮೋಹಿನಿಗೂ ಈತನಲ್ಲಿ ಅನುರಾಗ ವಿಶೇಷವುಂಟಾದುದರಿಂದಲೇ, ಅವಳು ಆತನಿಗೆ ಸ್ವಾಧೀನಳಾಗಿರುವಳು. ಅವಳಿಗೆ ನಿನ್ನಲ್ಲಿ

ಅನುರಾಗವಿಲ್ಲ ; ಅಲ್ಲದೆ, ಮಾಧವನ ಆಸ್ತಿಗೆ ನಿನಗೆ ಹಕ್ಕೂ ಇಲ್ಲ. ಹೀಗಿರುವಲ್ಲಿ, ಅವನ ಧರ್ಮವು ಅವನನ್ನು ಕಾಪಾಡಲಾರದೆ? ನೀನು ಎಷ್ಟು ಬಲಿಷ್ಠನಾದರೂ, ನಿನ್ನ ಅಧರ್ಮವು ನಿನ್ನನ್ನು ಕೆಡಿಸಲಾರದೆ ?

**ಶಂಬರ**—ಆಡಿದ್ದರಿಂದ ಪ್ರಯೋಜನವೇನು ? ಈ ವಿಷಯವು ಕಾರ್ಯತಃ ಗೊತ್ತಾಗುವುದು

**ಸುಮಿತ್ರ**—ಹಾಗಾದರೆ ನಿನ್ನ ಇಷ್ಟಬಂದಂತೆ ಮಾಡು. ನಾನು ಕಲಾವತಿಯ ಹೆಸರಿಗೆ ಬರೆದಿರುವ ಉಯಿಲನ್ನು ಸ್ಥಿರಪಡಿಸುವೆನು. (ಎಂದು ಹೇಳಿ ಹೊರಟುಹೋದನು.)

# ಅಧ್ಯಾಯ. V.

ಪರಂತಪನು, ತನಗೂ ಕಾಮಮೋಹಿನಿಗೂ ವಿವಾಹ ಪೂರಯಿಸಿದಕೂಡಲೆ, ಮುಂದೆ ನಡೆಯಬೇಕಾದ ಕಾರ್ಯನಿರ್ವಾಹಕ್ಕೋಸ್ಕರ ಕಲ್ಪತರುವಿಗೆ ಹೋದನು. ಅಲ್ಲಿಗೆ ಹೋದಕೂಡಲೆ, ಶಂಬರನಕಡೆಯ ಸೇವಕನೊಬ್ಬನು ಬಂದು ಕಾಗದವನ್ನು ತಂದುಕೊಟ್ಟನು. ಅದನ್ನು ಶಂಬರನು ಒಡೆದುಓದಿದನು,-

ಪರಂತಪನ ಸನ್ನಿಧಿಯಲ್ಲಿ,

ಶಂಬರನ ವಿಜ್ಞಾಪನೆ,

ಮಾಧವನ ಅವಸಾನಕಾಲದಲ್ಲಿ, ನೀನು ಉಪಾಯಾಂತರದಿಂದ ಅವನ ಕೈಪೆಟ್ಟಿಗೆ ಮೊದಲಾದುವುಗಳನ್ನು ಸ್ವಾಧೀನಪಡಿಸಿಕೊಂಡು, ಕೃತ್ರಿಮವಾದ ಒಂದು ಉಯಿಲನ್ನು ಸೃಷ್ಟಿಸಿ, ಆತನ ಆಸ್ತಿಯನ್ನೆಲ್ಲ ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಇಲ್ಲಿಗೆ ಬಂದುದಲ್ಲದೆ, ಇಲ್ಲಿ ನನ್ನಲ್ಲಿ ಪೂರ್ಣಾನುರಾಗವುಳ್ಳ ಕಾಮಮೋಹಿನಿಗೆ ದುರ್ಬೋಧನೆಯನ್ನು ಮಾಡಿ, ನಮ್ಮಿಬ್ಬರ ವಿವಾಹಕ್ಕೆ ವಿಘಾತವನ್ನುಂಟುಮಾಡಿದೆ. ಈ ತಪ್ಪಿತವನ್ನು ನೀನು ಒಪ್ಪಿ

ಕೊಳ್ಳುವ ಪಕ್ಷದಲ್ಲಿ, ಆ ಸ್ವತ್ತುಗಳನ್ನೂ ಉಯಿಲನ್ನೂ ಆ ಸುಂದರಿಯನ್ನೂ ತಂದು ಒಪ್ಪಿಸಿ ಶರಣಾಗತನಾಗು. ಇಲ್ಲದಿದ್ದರೆ, ನಾಳೆ ಪ್ರಾತಃಕಾಲ ಎಂಟುಘಂಟೆಯವೇಳೆಗೆ, ನಿನ್ನಕಡೆಯ ಪಂಚಾಯಿತರೊಡಗೊಂಡು, ಆಯುಧಪಾಣಿಯಾಗಿ ಊರಿನ ಹೊರಗಿರುವ ಉದ್ಯಾನಕ್ಕೆ ಯುದ್ಧಸನ್ನದ್ಧನಾಗಿ ಬರತಕ್ಕದ್ದು. ಆ ಯುದ್ಧದಲ್ಲಿ ಆಗುವ ಜಯಾಪಜಯಗಳೇ, ನಮ್ಮಿಬ್ಬರಲ್ಲಿರುವ ನ್ಯಾಯಾನ್ಯಾಯಗಳನ್ನು ತೋರ್ಪಡಿಸಲಿ. ಈ ವಿಷಯದಲ್ಲಿ ಮನಃಪೂರ್ವಕವಾಗಿ ನಾನು ಒಪ್ಪಿ ಈ ಲೇಖನವನ್ನು ಬರೆದಿರುತ್ತೇನೆ.

ಶಂಬರ.

ಅದನ್ನು ಓದಿದ ಕೂಡಲೆ, ಪರಂತಪನು ಕೆಳಗೆ ಬರೆದಿರುವಂತೆ ಪ್ರತ್ಯುತ್ತರವನ್ನು ಕಳುಹಿಸಿದನು.

ಶಂಬರನ ಸನ್ನಿಧಿಯಲ್ಲಿ,

ಪರಂತಪನ ವಿಜ್ಞಾಪನೆ,—

ನಿನ್ನ ಲೇಖನವನ್ನು ಓದಿಕೊಂಡೆನು. ಅದರಲ್ಲಿ ಕಂಡಂತೆ ನೀನು ನನ್ನಮೇಲೆ ಆಪಾದನೆಮಾಡಿರುವ ತಪ್ಪಿತಗಳೆಲ್ಲ ಸುಳ್ಳು. ನಿನ್ನ ಲೇಖನದಂತೆ ನೀನು ನಿರ್ಣಯಿಸಿರುವ ಸಂಕೇತಸ್ಥಾನಕ್ಕೆ ಸಿದ್ಧನಾಗಿ ನಾನು ಬರುವೆನು. ನೀನೂ ನಿನ್ನಕಡೆಯ ಪಂಚಾಯಿತರೊಡನೆ ಸಿದ್ಧನಾಗಿ ಬಾ. ನಮ್ಮಿಬ್ಬರ ನ್ಯಾಯಾನ್ಯಾಯಗಳು, ಈ ಯುದ್ಧದಿಂದಲೇ ಪ್ರಕಟವಾಗಲಿ.

ಪರಂತಪ.

ಈ ನಿರ್ಣಯಕ್ಕನುಸಾರವಾಗಿ, ಮರುದಿನವೇ ಆ ಪುರದ ಬಹಿರುದ್ಯಾನದಲ್ಲಿ ಇಬ್ಬರೂ ತಮ್ಮತಮ್ಮ ಕಡೆಯ ಪಂಚಾಯಿತರೊಡಗೊಂಡು ಬಂದು ಸೇರಿದರು. ಸುಮಿತ್ರನೂ ಅತ್ಯಾತುರನಾಗಿ ಬಂದು ಸೇರಿದನು. ಸಮರಸಿಂಹನೆಂಬ ಆ ಪಟ್ಟಣದ ಯಜಮಾನನೂ ಅಲ್ಲಿಗೆ ಬಂದನು. ಎರಡುಕಡೆಯ ಪಂಚಾಯಿತರೂ, ಆತನನ್ನು ಸಭಾಧ್ಯಕ್ಷನನ್ನಾಗಿ ನಿರ್ಣಯಿಸಿದರು. ಇವರಿಬ್ಬರ ಪಿಸ್ತೂಲಿನಲ್ಲಿಯೂ ಒಂದೊಂದು ಗುಂಡು ಇರುವಂತೆಯೂ, ಅದನ್ನು ಒಂದಾವೃತ್ತಿ ಹಾರಿಸಿ ಅದರಲ್ಲಿ ಜಯಾಪಜಯಗಳು ಗೊತ್ತಾಗದಿದ್ದರೆ ಪಂಚಾಯಿತರ ಅನುಮತಿಯಿಂದ ಮತ್ತೊಂದಾವೃತ್ತಿ ಪ್ರಯೋಗಿಸಬೇಕೆಂದೂ ನಿರ್ಣಯಿಸಿಕೊಂಡರು. ಕೂಡಲೆ, ಇವರಿಬ್ಬರನ್ನೂ ಮಧ್ಯದಲ್ಲಿ ಮುವ್ವತ್ತು

ಗಣ ಅಂತರಾಳವನ್ನು ಬಿಟ್ಟು ನಿಲ್ಲಿಸಿದರು. ಎರಡುಕಡೆಯು ಪಂಚಾಯಿತರ ಅನುಮತಿಯಿಂದ, ಸಭಾಧ್ಯಕ್ಷನಾದ ಸಮರಸಿಂಹನು ಯುದ್ಧನಿಯಮಗಳನ್ನು ಓದಿದನು ಭಟರಿಬ್ಬರೂ ನಿಯಮಕ್ಕನುಸಾರವಾಗಿ ನಡೆಯುವುದಾಗಿ ಒಪ್ಪಿದರು. ಆಗ ಸಮರಸಿಂಹನು ಅವರಿಬ್ಬರನ್ನೂ ನೋಡಿ “ ಎಲೈ ವೀರರೇ ! ನಿಮ್ಮಿಬ್ಬರಲ್ಲಿ ಯಾರೇ ಆಗಲಿ-ಈಗ ಪಂಚಾಯಿತರಿಂದ ನಿರ್ಣಯಿಸಲ್ಪಟ್ಟ ನಿಯಮಗಳಗನುಸಾರವಾಗಿ ನಡೆಯದೆ ಅತಿಕ್ರಮಿಸಿದಲ್ಲಿ, ಈ ವಿಷಯವನ್ನು ಪಂಚಾಯಿತರ ತೀರ್ಪಿಗೆ ಹಾಕಿ ಅವರಲ್ಲಿ ಹೆಚ್ಚು ಜನರ ಅನುಮತಿಯಂತೆ ಯಾರು ತಪ್ಪಿತವುಳ್ಳವರೋ ಅವರನ್ನು ಕೊಲ್ಲುತ್ತೇನೆ. ಇದೋ ! ಅದಕ್ಕಾಗಿಯೇ ನಾನು ಕೈಯಲ್ಲಿ ಪಿಸ್ತೂಲನ್ನು ಹಿಡಿದಿರುತ್ತೇನೆ. ಜೋಕೆ ! ಎಚ್ಚರವಾಗಿರಿ ! ” ಎಂದು ಹೇಳಲು, ಅದಕ್ಕೆ ಅವರಿಬ್ಬರೂ ಅನುಮತಿಸಿ, ಪಂಚಾಯಿತರ ತೀರ್ಮಾನದಂತೆ ಅಧರ್ಮಪ್ರವೃತ್ತರಾದವರು ಶಿಕ್ಷೆಗೆ ಗುರಿಯಾಗುವುದಾಗಿ ಒಪ್ಪಿಕೊಂಡು, ಯುದ್ಧಸನ್ನದ್ಧರಾಗಿ ನಿಂತರು. ಆಗ ಶಂಬರನು ಪರಂತಪನನ್ನು ನೋಡಿ “ ಎಲೈ ದುರಾತ್ಮನಾದ ಪರಂತಪನೆ ! ನೀನು ಬಹು ದುಷ್ಟನು ಏನೋ ತಂತ್ರಗಳನ್ನು ಮಾಡಿ ಮಾಧವನ ಸ್ವತ್ತುಗಳನ್ನು ಅಪಹರಿಸಿದ್ದಲ್ಲದೆ, ನನಗೋಸ್ಕರ ನಿಶ್ಚಯಿಸಲ್ಪಟ್ಟದ್ದ ಕಾಮಮೋಹಿನಿಗೆ ದುರ್ಬೋಧನೆಯನ್ನು ಮಾಡಿ ಅವಳನ್ನೂ ಸ್ವಾಧೀನಪಡಿಸಿಕೊಂಡು ವಿವಾಹಕಂಟಕನಾದೆ. ಈ ದುಷ್ಕೃತ್ಯಕ್ಕೆ ತಕ್ಕ ಶಿಕ್ಷೆಗೆ ಗುರಿಯಾಗುವೆ. ” ಎಂದನು.

**ಪರಂತಪ**—ಎಲೈ ನೀಚನೇ ! ವೃಥಾ ವಾಗಾಡಂಬರದಿಂದ ಪ್ರಯೋಜನವೇನು ? ನಮ್ಮಿಬ್ಬರ ನ್ಯಾಯಾನ್ಯಾಯಗಳು ಇನ್ನು ಸ್ವಲ್ಪಹೊತ್ತಿನೊಳಗಾಗಿಯೇ ಗೊತ್ತಾಗುವುವು. ಮಾಧವನು ಸ್ವಹಸ್ತದಿಂದ ರುಜುಹಾಕಿ ಬರೆದಿರುವ ಉಯಿಲನ್ನೂ, ಅದಕ್ಕೆ ಸಾಕ್ಷಿಭೂತರಾಗಿ ರುಜು ಮಾಡಿರುವ ಅಧಿಕಾರಿಗಳ ವಾಙ್ಮೂಲವನ್ನೂ ತೆಗೆದು ಚೆನ್ನಾಗಿ ಪರಿಶೀಲನೆ ಮಾಡಿದರೆ, ಮಾಧವನ ಆಸ್ತಿಯು ನನಗೆ ತಂತ್ರದಿಂದ ಪ್ರಾಪ್ತವಾಯಿತೋ_ಅಥವಾ ಮಾಧವನ ವಿಷಯದಲ್ಲಿ ನೀನು ಮಾಡಿದ ಕೃತಘ್ನತೆಯಿಂದ ನನಗೆ ಲಭ್ಯವಾಯಿತೋ-ಚೆನ್ನಾಗಿ ಗೊತ್ತಾಗುವುದು. ಇದಿರಲಿ; ಕಾಮಮೋಹಿನಿಯನ್ನು ನಾನು ಅಪಹರಿಸಿಕೊಂಡು ಬಂದೆನೆ? ನಿನ್ನ ಕೆಟ್ಟ ಶೀಲಸ್ವಭಾವಗಳೇ ಅವ

ಳಿಗೆ ನಿನ್ನಲ್ಲಿ ಜುಗುಪ್ಸೆಯುಂಟಾಗುವಂತೆ ಮಾಡಿದುವಲ್ಲವೆ ? ಈಕೆಯಲ್ಲಿ ಮಾಧವನು ಅನುರಕ್ತನಾಗಿರಲಿಲ್ಲವೆ ? ಪಿತೃದ್ರೋಹಿಯಾದ ನೀನು, ಅವರಿಬ್ಬರಿಗೂ ವೈಮನಸ್ಯವನ್ನುಂಟುಮಾಡಿ ಅವನ ಅಕಾಲಮರಣಕ್ಕೂ ಮುಖ್ಯ ಕಾರಣಭೂತನಾದೆ. ಈ ಪಾಪಕ್ಕೆ ತಕ್ಕ ಫಲವನ್ನು ಅನುಭವಿಸದಿರುವುದಿಲ್ಲ. ಅವಳನ್ನು ನಿನ್ನ ದುರ್ಬುದ್ಧಿಯಿಂದಲೇ ನೀನು ಕಳೆದುಕೊಂಡು, ಈಗ ಪುನಃ ನನ್ನನ್ನು ಪ್ರಾರ್ಥಿಸುವುದು ಬಹಳ ವಿಸ್ಮಯಾವಹವಾಗಿದೆ. ನಾನು ನಿನಗೆ ಶರಣಾಗತನಾಗಬೇಕೋ ? ಆಗಲಿ, ನಿನ್ನ ಕೃತ್ಯಕ್ಕೆ ತಕ್ಕ ಫಲವನ್ನು ಈಗಲೇ ತೋರಿಸುವೆನು.

**ಶಂಬರ**—ಎಲಾ ದುರಾತ್ಮನೆ ! ಮಾಧವನ ಮರಣಕಾಲದಲ್ಲಿ ಅವನ ಸಮೀಪದಲ್ಲಿದ್ದವನು ನೀನು. ನೀನೇ ಅವನ ಮರಣಕ್ಕೆ ಕಾರಣಭೂತನು. ನಿನಗೆ ಇಂಥ ದುರ್ಬುದ್ಧಿ ಹುಟ್ಟುವುದಕ್ಕೂ ಅವನ ಅಸ್ವಾದೃಶವಾದ ಸಂಪತ್ತುಗಳೇ ಕಾರಣವು. ನಿನ್ನ ವಂಚನೆಗೆ ಒಳಪಟ್ಟು ಕಾಮಮೋಹಿನಿಯು ನಿನಗೆ ಸ್ವಾಧೀನಳಾದುದಕ್ಕೆ, ನನ್ನ ಶೀಲಸ್ವಭಾವಗಳಲ್ಲಿ ದೋಷವನ್ನು ಕಲ್ಪಿಸುವೆಯೋ ? ಎಲೈ ನೀಚನೇ ! ನಿನ್ನೊಡನೆ ವೃಥಾಲಾಪಗಳಿಂದ ಪ್ರಯೋಜನವೇನು ? ಅಯ್ಯಾ ! ಸಮರಸಿಂಹ ! ಈ ನೀಚನ ಪ್ರಲಾಪವನ್ನು ನಿಲ್ಲಿಸುವೆನು ; ಆಜ್ಞೆಯನ್ನು ಕೊಡು.

**ಪರಂತಪ**—ಎಲೈ ಸಮರಸಿಂಹನೇ ! ಈ ನೀಚನೊಡನೆ ವೃಥಾ ವಾಕ್ಕಲಹದಿಂದ ಪ್ರಯೋಜನವೇನು ? ನಮ್ಮ ನಮ್ಮ ನ್ಯಾಯಾನ್ಯಾಯಗಳಿಗೆ ನಮ್ಮ ನಮ್ಮ ಮನಸ್ಸೇ ಕಾರಣಭೂತವಾಗಿರುತ್ತದೆ. ಅಲ್ಲದೆ, ನಮ್ಮಿಬ್ಬರ ಧರ್ಮಾಧರ್ಮಗಳನ್ನು ಸರ್ವಾಂತರ್ಯಾಮಿಯಾದ ಜಗದೀಶ್ವರನೊಬ್ಬನೇ ಬಲ್ಲನು. ನಾನು ಮಾಧವನ ಆಸ್ತಿಯ ವಿಷಯದಲ್ಲಾಗಲಿ ಕಾಮಮೋಹಿನಿಯ ವಿಷಯದಲ್ಲಾಗಲೀ ದುರಾಶೆಪಟ್ಟು ಪ್ರವರ್ತಿಸಿದ್ದರೆ, ಶಂಬರನ ಪ್ರಹಾರವು ನನಗೆ ತಗುಲಲಿ ; ಹಾಗಿಲ್ಲದೆ ಈತನು ಪಿತೃದ್ರೋಹಿಯೂ ಕೃತಘ್ನನೂ ಆಗಿದ್ದಲ್ಲಿ, ನನ್ನ ಪ್ರಹಾರಕ್ಕೆ ಈತನೇ ಗುರಿಯಾಗಲಿ. ಧರ್ಮವಿದ್ದಕಡೆ ಜಯವೆಂಬುದು ಈಗ ಸ್ಥಿರಪಡುವುದು. ಇನ್ನು ನಮಗೆ ಆಜ್ಞೆಯನ್ನುಕೊಡು.

ಸಮರಸಿಂಹನು “ಅಯ್ಯಾ ! ಇನ್ನು ನಿಮ್ಮಿಬ್ಬರ ಸಲ್ಲಾಪಗಳನ್ನು ನಿಲ್ಲಿಸಿರಿ. ಯುದ್ಧಕ್ಕೆ ಸಿದ್ಧರಾಗಿರಿ. ನಾನು ಒಂದರಿಂದ ಮೂರರವರೆಗೆ

ಎಣಿಸಿದಕೂಡಲೆ, ನಿಮ್ಮ ಪಿಸ್ತೂಲನ್ನು ಏಕಕಾಲದಲ್ಲಿ ಹಾರಿಸತಕ್ಕುದು" ಎಂದು ಹೇಳಲು, ಪ್ರತ್ಯರ್ಥಿಗಳಿಬ್ಬರೂ, ತಮ್ಮತಮ್ಮ ಆಯುಧಗಳನ್ನು ಸಿದ್ಧಪಡಿಸಿಕೊಂಡು ಸನ್ನದ್ಧರಾದರು. ಸುಮಿತ್ರನು, ಶಂಬರನ ಜಯವನ್ನು ನಿರೀಕ್ಷಿಸುತ್ತ ಪರಂತಪನ ಬಲಗಡೆಯಲ್ಲಿ ನಿಂತಿದ್ದನು.

**ಸಮರಸಿಂಹ**—ಇನ್ನು ಸಿದ್ಧರಾಗಿ. ಒಂದು! ಎರಡು!! ಮೂರು!!!

ಕೂಡಲೇ ಎರಡು ಪಿಸ್ತೂಲುಗಳು ಹಾರಿಸಲ್ಪಟ್ಟುವು. ಶಂಬರನ ಗುಂಡು ಗುರಿತಪ್ಪಿ, ಪರಂತಪನ ಬಲಗಡೆಯಲ್ಲಿ ನಿಂತಿದ್ದ ಸುಮಿತ್ರನಿಗೆ ತಗುಲಿ, ಕೂಡಲೆ ಅವನು ಕೆಳಕ್ಕೆ ಬಿದ್ದು ಒದ್ದಾಡಿ ಮೃತನಾದನು. ಪರಂತಪನ ಗುಂಡು ಶಂಬರನ ಬಲಭುಜಕ್ಕೆ ತಗುಲಿ ಅವನೂ ಕೆಳಗೆ ಬಿದ್ದನು. ಕೂಡಲೇ ಪಂಚಾಯಿತರಲ್ಲಿ ಒಬ್ಬನಾಗಿದ್ದ ವೈದ್ಯನೊಬ್ಬನು, ಶಂಬರನಿಗೆ ಬಿದ್ದ ಏಟನ್ನು ಪರೀಕ್ಷಿಸಿ, ಕೂಡಲೇ ಬಾಹುಚ್ಛೇದವನ್ನು ಮಾಡಿ ಚಿಕಿತ್ಸೆ ಮಾಡಿದರೆ ಅವನು ಬದುಕಬಹುದೆಂದು ಹೇಳಿದನು. ಸ್ವಲ್ಪಹೊತ್ತಿನಲ್ಲಿಯೇ ಶಂಬರನು ಪ್ರಜ್ಞೆಹೊಂದಿ, ವೈದ್ಯನ ಅಭಿಪ್ರಾಯವನ್ನು ಕೇಳಿ, ಅವನ ಹೇಳಿಕೆಯಂತೆ ತನ್ನ ಬಾಹುಚ್ಛೇದಕ್ಕೆ ಒಪ್ಪಿಕೊಂಡನು. ಕೂಡಲೇ ಆ ವೈದ್ಯನು ಅವನನ್ನು ವೈದ್ಯಶಾಲೆಗೆ ಕರೆದುಕೊಂಡು ಹೋಗಿ, ಇತರ ವೈದ್ಯರ ಅಭಿಪ್ರಾಯವನ್ನೂ ಕೇಳಿ, ಇವನ ಬಲದ ಭುಜವನ್ನು ತೆಗೆಯಿಸಿದನು. ಮೂರುತಿಂಗಳೊಳಗಾಗಿ ಆ ವ್ರಣವು ವಾಸಿಯಾಯಿತು. ಅದುವರೆಗೂ ಆ ಯಾತನೆಯಿಂದ ಅವನು ಬಹಳ ಕೃಶನಾಗಿದ್ದನು. ಆಮೇಲೆ ಪಂಚಾಯಿತರೆಲ್ಲರೂ ಸೇರಿ, ಪರಂತಪನನ್ನು ಮುಂದಿರಿಸಿಕೊಂಡು, ಶಂಬರನನ್ನು ನೋಡಿ "ಅಯ್ಯಾ! ಶಂಬರ! ನಿಮ್ಮಿಬ್ಬರ ಯುದ್ಧವೂ ಪೂರಯಿಸಿ ಮೂರು ತಿಂಗಳುಗಳಾದುವು. ನೀನು ಅವನ ಪ್ರಹಾರದಿಂದ ಮೃತನಾಗಿಯೇ ಹೋಗಿದ್ದ ಪಕ್ಷದಲ್ಲಿ, ಆ ಪರಂತಪನು ನಿರ್ದೋಷಿಯೆಂದು ಆಗಲೇ ತೀರ್ಮಾನಿಸುತ್ತಿದ್ದೆವು. ಈಗಲೂ ಹಾಗೆ ತೀರ್ಮಾನಿಸುವ ವಿಚಾರದಲ್ಲಿ ಯಾವ ಅಭ್ಯಂತರವೂ ಇಲ್ಲ. ಆದರೂ ನಿನ್ನ ಅಭಿಪ್ರಾಯವೇನು?—ಹೇಳು,

**ಶಂಬರ**—ಈ ನೀಚನಾದ ಪರಂತಪನು, ನನ್ನನ್ನು ಕೊಲ್ಲದೆ, ನಾನು ಜೀವಿಸಿದ್ದು ಮನಃಕ್ಲೇಶವನ್ನು ಅನುಭವಿಸಬೇಕೆಂಬ ಅಭಿಪ್ರಾಯದಿಂದ, ಜೀವಚ್ಛವವನ್ನಾಗಿ ಮಾಡಿದನು. ಆದರೂ ಚಿಂತೆಯಿಲ್ಲ; ಈ ಯುದ್ಧದಿಂ

ದಲೇ ನ್ಯಾಯ ನಿರ್ಣಯವಾಗುವುದಾಗಿಲ್ಲ. ಕಲಿಪ್ರಚುರವಾದ ಈ ಕಾಲವು ವ್ಯತ್ಯಸ್ತಸ್ಥಿತಿಯುಳ್ಳುದಾದುದರಿಂದ, ಪಾಪಶೀಲರಿಗೆ ಉತ್ತಮಸ್ಥಿತಿಯನ್ನೂ ಸುಕೃತಿಗಳಿಗೆ ಅಧೋಗತಿಯನ್ನೂ ಉಂಟುಮಾಡುವುದು ಸ್ವಭಾವಸಿದ್ಧವಾಗಿದೆ. ಮಾಡತಕ್ಕುದೇನು ?

**ಸಮರಸಿಂಹ**—ನ್ಯಾಯನಿರ್ಣಯಕ್ಕಾಗಿ ಈ ಯುದ್ಧವನ್ನು ಏರ್ಪಡಿಸಿದವನೇ ನೀನು. ಇದರಲ್ಲಿ ನಿರಾಕ್ಷೇಪವಾಗಿ ಧರ್ಮವ್ಯವಸ್ಥೆಯಾಗುವುದೆಂದು ನಿಷ್ಕರ್ಷಿಸಿದವನೂ ನೀನು. ಈಗ ಯುದ್ಧದಿಂದ ನ್ಯಾಯನಿರ್ಣಯವಾಗುವುದಿಲ್ಲವೆಂದು ನೀನೇ ಹೇಳುತ್ತೀಯಾ ? ಇಂಥ ಅಸಂಬದ್ಧಪ್ರಲಾಪಗಳಿಗೆ ಯಾರಿಂದತಾನೆ ಪ್ರತ್ಯುತ್ತರವನ್ನು ಕೊಡಲಾದೀತು ? ನಿನ್ನ ಶತ್ರುವಿಗೆ ತಗುಲಬೇಕಾಗಿದ್ದ ನಿನ್ನ ಗುಂಡು, ನಿನ್ನ ಕಡೆಯವನಾದ ಸುಮಿತ್ರನಿಗೆ ತಗುಲಿ, ಅವನೇ ಸಾಯಬೇಕಾದರೆ, ನಿನ್ನ ಅಧರ್ಮವು ಇದರಿಂದಲೇ ಸ್ಪಷ್ಟವಾಗುವುದಲ್ಲವೆ ? ಇದೆಲ್ಲ ಹಾಗಿರಲಿ; ಈಗ ಸುಮಿತ್ರನನ್ನು ಕೊಂದ ತಪ್ಪಿತಕ್ಕೆ ಗುರಿಯಾಗತಕ್ಕವರು ಯಾರು ?

**ಶಂಬರ**—ಯುದ್ಧನಿರ್ಣಯಕ್ಕನುಸಾರವಾಗಿ ಪಂಚಾಯಿತರು ತೀರ್ಮಾನವನ್ನು ಕೊಡುವ ವಿಷಯದಲ್ಲಿ ಯಾವ ಅಡ್ಡಿಯೂ ಇಲ್ಲ. ಆ ವಿಷಯದಲ್ಲಿ ನಾನು ಬದ್ಧನಾಗಿಯೇ ಇರುತ್ತೇನೆ. ಸುಮಿತ್ರನನ್ನು ಕೊಲ್ಲುವ ವಿಷಯದಲ್ಲಿ ನಾನು ಮನಃಪೂರ್ವಕವಾಗಿ ಪ್ರವರ್ತಿಸಿದವನಲ್ಲ. ಆದುದರಿಂದ, ಆ ವಿಚಾರದಲ್ಲಿಮಾತ್ರ ನಾನು ತಪ್ಪಿತಸ್ಥನಾಗಲಾರೆನು.

**ಪಂಚಾಯಿತರು** – ಇದು ನಮ್ಮ ಪಂಚಾಯಿತರ ತೀರ್ಮಾನಕ್ಕೆ ಒಳಪಟ್ಟುದುದಲ್ಲ. ಆ ವಿಷಯವು ಹೇಗಾದರೂ ಇರಲಿ. ಈಗಲೂ ನೀನು ಪರಂತಪನಲ್ಲಿ ಶರಣಾಗತಿಯನ್ನು ಹೊಂದಿ ಅವನಮೇಲೆ ನೀನು ಹೊರಿಸಿರುವ ದೋಷಗಳೆಲ್ಲ ಅಸತ್ಯವಾದುವುಗಳೆಂದು ಒಪ್ಪಿಕೊ ; ಅದರಿಂದ ನಿನಗೆ ಕ್ಷೇಮವುಂಟು. ಈ ವಿಷಯದಲ್ಲಿ ನಾವು ಅನುಮತಿಸಿರುತ್ತೇವೆ. ನಮ್ಮ ಮಾತನ್ನು ಕೇಳು.

**ಶಂಬರ**—ಮಹನೀಯರೇ ! ನಿಮ್ಮ ಆಜ್ಞೆಯನ್ನು ಶಿರಸಾ ವಹಿಸಿದೆನು. ಅಯ್ಯಾ ! ಪರಂತಪನೇ ! ನಾನು ದುರಭಿಪ್ರಾಯದಿಂದ ಇದುವರೆಗೂ ನಿನ್ನ ಮೇಲೆ ದೋಷಾರೋಪಣೆಗಳನ್ನು ಮಾಡಿ ನಿನ್ನನ್ನು ಯುದ್ಧಕ್ಕೆ ಕರೆದೆನು.

ಇದರ ಫಲಿತಾಂಶದಿಂದಲೇ, ನಾನು ಮಾಡಿದ ಆಪಾದನೆಗಳೆಲ್ಲ ಅಸತ್ಯಗಳೆಂದು ವ್ಯಕ್ತಪಡುವುದು. ನನ್ನ ದುರ್ಬುದ್ಧಿಗಾಗಿ ನಾನೇ ವಿಷಾದಿಸಬೇಕಾಗಿದೆ. ಈ ನನ್ನ ಅಪರಾಧಗಳನ್ನು ಕ್ಷಮಿಸುವನಾಗು.

**ಪರಂತಪ**—ಅಯ್ಯಾ! ಶಂಬರನೆ! ಅಪಕಾರಮಾಡಿಸಿಕೊಂಡವರಿಗಿಂತಲೂ ಅಪಕಾರ ಮಾಡಿದವರಿಗೆ ದ್ವೇಷವು ದೀರ್ಘವಾಗಿರುವುದು ಲೋಕಸ್ವಭಾವವು. ಹೀಗಿರುವಲ್ಲಿ, ನೀನೇ ದ್ವೇಷವನ್ನು ಬಿಟ್ಟು ಸಮಾಧಾನವನ್ನು ಹೊಂದುವಾಗ, ನಾನು ಮನಃಕಾಲುಷ್ಯವನ್ನು ಬಿಡುವುದೇನು ಅಸಾಧ್ಯ? ನಿನ್ನ ಪ್ರಾರ್ಥನೆಯಿಂದ ನಾನು ಬಹಳ ಸಂತೋಷಿಸಿದೆನು. ಸ್ನೇಹದಿಂದಾಗತಕ್ಕ ಅನುಕೂಲ್ಯಗಳು ದ್ವೇಷದಿಂದ ಆಗುವುದಿಲ್ಲ. ಈ ಯುದ್ಧದಿಂದ ನಿನಗೆ ಆಗಿರತಕ್ಕ ನಷ್ಟಗಳನ್ನು ನೋಡಿ, ನಾನು ತುಂಬ ವಿಷಾದಿಸಬೇಕಾಗಿದೆ. ಮಾಧವನ ಆಸ್ತಿಗೆ ನಾನು ಆಶೆಪಟ್ಟು ಪ್ರವರ್ತಿಸಿದವನೆಂದು ತಿಳಿಯಬೇಡ. ಅವನು ಬರೆದಿರುವ ಉಯಿಲಿನಲ್ಲಿಯೇ, ಆ ದ್ರವ್ಯದ ವಿನಿಯೋಗಗಳೆಲ್ಲ ವ್ಯಕ್ತಪಡುವುವು. ಆದರಂತೆ ಆ ಪತ್ರವನ್ನು ರಿಜಿಸ್ಟರ್ ಮಾಡಿಸುವುದಕ್ಕಾಗಿ ಮಾಧವನಕಡೆ ಲಾಯರಾದ ಅರ್ಥಪರನು ಬರುತ್ತಾನೆ. ಆ ವುಯಿಲು ರಿಜಿಸ್ಟರಾದಕೂಡಲೆ, ಅದರಲ್ಲಿ ಕಾಣಿಸಿರುವಂತೆ ನನ್ನ ಭಾಗಕ್ಕೆ ಬರತಕ್ಕ ದ್ರವ್ಯಗಳನ್ನು ನಿನಗೇ ಒಪ್ಪಿಸುತ್ತೇನೆ. ಅದನ್ನೂ, ನಿನ್ನ ದೊಡ್ಡಪ್ಪನಾದ ಸುಮಿತ್ರನ ಆಸ್ತಿಯನ್ನೂ ಸ್ವಾಧೀನಪಡಿಸಿಕೊಂಡು, ಕಲಾವತಿಯನ್ನು ವರಿಸಿ, ಅವಳೊಡನೆ ಸೌಖ್ಯವಾಗಿ ಬದುಕು. ಇನ್ನು ನಾನು ಹೋಗುತ್ತೇನೆ. ಅನುಮತಿಯನ್ನು ಕೊಡು.

**ಶಂಬರ**—"ಅಯ್ಯಾ; ವಂದಿಸುವೆನು. ನೀನು ಹೇಳಿದ ವಿಷಯವನ್ನೆಲ್ಲ ಮುಂದೆ ಪರ್ಯಾಲೋಚಿಸಿ ಸೂಕ್ತವಾದಂತೆ ನಡೆಸೋಣ." ಎಂದು ಹೇಳಿ, ಆತನನ್ನೂ ಪಂಚಾಯಿತರನ್ನೂ ಬಹುಮಾನಪುರಸ್ಸರನಾಗಿ ಕಳುಹಿಸಿಕೊಟ್ಟನು.

ಸಮರಸಿಂಹನು, ಪಂಚಾಯಿತರೊಡನೆ ದಾರಿಯಲ್ಲಿ ಹೋಗುತ್ತ, ಪರಂತಪನನ್ನು ನೋಡಿ 'ಅಯ್ಯಾ! ಪರಂತಪ! ನೀನೇ ಅದೃಷ್ಟಶಾಲಿ. ಶಂಬರನ ಗುಂಡು ನಿನಗೆ ತಗುಲಿದ್ದರೆ, ನಿನ್ನ ಗತಿಯೇನಾಗುತಿತ್ತು?

**ಪರಂತಪ**—(ಹುಸಿನಗೆಯೊಡನೆ) ನಾನು ಇಂಥ ನೂರಾರು ವಿಪತ್ತುಗಳಿಗೆ ಗುರಿಯಾಗಿದ್ದೇನೆ. ಅವೆಲ್ಲ ದೈವಯೋಗದಿಂದ ಪರಿಹಾರವಾಗಿವೆ.

**ಸಮರಸಿಂಹ**--ಅದು ಹಾಗಿರಲಿ; ಶಂಬರನು ಗುರಿಹಿಡಿದು ಹೊಡೆಯುವ ವಿಷಯದಲ್ಲಿ ಸಮರ್ಥನೆಂದು ನೀನು ನಂಬಿರುವೆಯೋ ?

**ಪರಂತಪ**—ಎಂದಿಗೂ ಇಲ್ಲ ; ಹಾಗೆ ಅವನು ಶಕ್ತನಾಗಿದ್ದಪಕ್ಷದಲ್ಲಿ, ನನ್ನ ಪಾರ್ಶ್ವದಲ್ಲಿ ಬಹುದೂರದಲ್ಲಿ ನಿಂತಿದ್ದ ಸುಮಿತ್ರನಿಗೆ ಎಂದಿಗೂ ಗುಂಡು ತಗುಲುತ್ತಿರಲಿಲ್ಲ. ಅವನ ಗುಂಡು ಆಕಸ್ಮಾತ್ತಾಗಿ ಸುಮಿತ್ರನಿಗೆ ತಗುಲಿರಬಹುದು.

**ಸಮರಸಿಂಹ**—ಅವನು ಮನಃಪೂರ್ವಕವಾಗಿ ಕ್ಷಮಾಪಣೆಯನ್ನು ಕೇಳಿಕೊಂಡಿರುವನೆಂದು ನಂಬಿರುವೆಯೋ ?

**ಪರಂತಪ**—ಆ ಅಭಿಪ್ರಾಯವೂ ವ್ಯಕ್ತವಾಗಿಯೇ ಇರುವುದು. ನಾನು ಏನುಮಾಡಿದಾಗ್ಯೂ, ಅವನಿಗೆ ನನ್ನಲ್ಲಿ ಮನಃಪೂರ್ವಕವಾಗಿ ಪ್ರೀತಿಯು ಎಂದಿಗೂ ಉಂಟಾಗುವುದಿಲ್ಲ. ಸಾಧ್ಯವಾದಪಕ್ಷದಲ್ಲಿ ಅವನು ನನ್ನನ್ನು ಕೊಲ್ಲುವುದಕ್ಕೂ ಹಿಂಜರಿಯುವವನಲ್ಲ. ಸುಮಿತ್ರನು ತನ್ನ ಆಸ್ತಿಯು ಕಲಾವತಿಗೆ ಸೇರತಕ್ಕುದೆಂದು ಉಯಿಲಿನಲ್ಲಿ ಕಾಣಿಸಿರುತ್ತಾನೆ ಮಾಧವನ ಆಸ್ತಿಯು ನನಗೆ ಸೇರತಕ್ಕುದಾಗಿದೆ ಇವೆರಡೂ ಈತನಿಗೆ ಪಿತ್ರಾರ್ಜಿತವು. ಇವು ಹೊರತು ಈತನಿಗೆ ಇನ್ನೇನೂ ಗತಿಯಿಲ್ಲ. ಇವನ ದುರವಸ್ಥೆಯನ್ನು ನೋಡಿ, ನಾನು ನನ್ನ ಭಾಗಕ್ಕೆ ಬಂದ ಮಾಧವನ ಆಸ್ತಿಯನ್ನು ಈತನಿಗೇ ಕೊಡಬೇಕೆಂದು ಯೋಚಿಸಿದೆನು. ಆದರೆ ಇವನು ಇವುಗಳನ್ನು ಪರಿಗ್ರಹಿಸಿ ಬದುಕತಕ್ಕವನಲ್ಲ. ಏನಾದರೂ ದುರ್ವೃತ್ತಿಗಳನ್ನು ನಡೆಸಿ ತಕ್ಕ ಫಲವನ್ನು ಅನುಭವಿಸುವನೆಂದು ತೋರುತ್ತದೆ.

**ಸಮರಸಿಂಹ**—ನೀನು ಹೇಳುವುದೆಲ್ಲ ನಿಜ. ಶಂಬರನ ಪೂರ್ವಾಪರಗಳನ್ನೆಲ್ಲ ನಾನು ಕೇಳಿರುವೆನು. ಅವನು ಕಾಲಾಂತರದಲ್ಲಿ ನಿನಗೆ ಮೃತ್ಯುವಾಗುವನೆಂದು ಊಹಿಸುವೆನು.

**ಪರಂತಪ**—ಮನುಷ್ಯಯತ್ನದಂತೆಯೇ ದೈವವು ನಡೆಸುವುದೆಂದು ನಂಬುವುದು ಹೇಗೆ ? ದೈವವು ನಮ್ಮಕಡೆಗೆ ಅನುಕೂಲವಾಗಿರಬಾರದೆ ? ನಾವು ಇದಕ್ಕೆ ಚಿಂತಿಸುವುದೇಕೆ ?

ಹೀಗೆ ಪರಸ್ಪರ ಸಲ್ಲಾಪಗಳನ್ನು ಮಾಡುತ, ಎಲ್ಲರೂ ಪುರಪ್ರವೇಶವನ್ನು ಮಾಡಿ, ತಮ್ಮ ತಮ್ಮ ವಾಹನಗಳನ್ನಿಳಿದು, ಆ ಪುರದ ಒಂದು

ಭೋಜನಾಲಯದಲ್ಲಿ ಸ್ನಾನಭೋಜನಾದಿಗಳನ್ನು ತೀರಿಸಿಕೊಂಡು, ಸ್ವಲ್ಪ ಹೊತ್ತು ವಿನೋದವಾಗಿ ಮಾತನಾಡುತಿದ್ದು, ವಿಶ್ರಮಾರ್ಥವಾಗಿ ಎಲ್ಲರೂ ಅವರವರ ವಾಸಸ್ಥಾನಗಳಿಗೆ ಹೊರಟುಹೋದರು.

## ಅಧ್ಯಾಯ. ೯.

ಮಾರನೆಯ ದಿವಸ ಅರುಣೋದಯಕಾಲಕ್ಕೆ ಎದ್ದು ಪರಂತಪನು ಸುಮಿತ್ರನ ಉಪವನಕ್ಕೆ ಏಕಾಂತವಾಗಿ ಪ್ರವೇಶಿಸಿ ತಾನು ಅಲ್ಲಿ ಹೂತಿಟ್ಟಿದ್ದ ಪೆಟ್ಟಿಗೆಯನ್ನು ತೆಗೆದುಕೊಂಡು ಹೋಗುತ್ತಿರುವಾಗ, ಕಲಾವತಿಯು ಎದುರಿಗೆ ಬಂದಳು.

**ಕಲಾವತಿ**—ಎಲೈ ಪರಂತಪನೇ! ಇದೇನು-ಇಷ್ಟುಹೊತ್ತಿಗೆಮುಂಚೆ ಇಲ್ಲಿಗೆ ಬಂದಿರುವೆ? ರಾತ್ರಿ ಮನೆಯಲ್ಲಿದ್ದೆಯಾ? ನಿನ್ನನ್ನು ನಾನು ನೆನ್ನೆ ಕಾಣಲೇ ಇಲ್ಲ! ಇದೇನು ಪೆಟ್ಟಿಗೆ?

**ಪರಂತಪ**—ಇಲ್ಲ. ನೆನ್ನೆ ನಾನು ಇರಲಿಲ್ಲ. ಇದು ನನ್ನ ಕಾಗದ ಪತ್ರಗಳ ಪೆಟ್ಟಿಗೆ. ಇದನ್ನು ನನ್ನ ಮಿತ್ರನೊಬ್ಬನ ಬಳಿಗೆ ತೆಗೆದುಕೊಂಡು ಹೋಗಬೇಕಾಗಿರುವುದು

**ಕಲಾವತಿ**—ನೆನ್ನೆ ನಿನಗೂ ನನ್ನ ಮಾವನಿಗೂ ಮನಸ್ತಾಪ ನಡೆದು ಅದರಮೇಲೆ ನೀನು ಮನೆಯನ್ನು ಬಿಟ್ಟು ಹೊರಟುಹೋದಂತೆ ಕೇಳಿದೆನು. ಇದು ನಿಜವೆ? ಇದಕ್ಕೆ ಕಾರಣವೇನು?

**ಪರಂತಪ**—ಇನ್ನೇನೂ ಇಲ್ಲ. ಕಾಮಮೋಹಿನಿಯನ್ನು ದುರ್ಬೋಧನೆಯಿಂದ ನನ್ನ ಸ್ವಾಧೀನಮಾಡಿಕೊಂಡೆನೆಂದು, ನಿಮ್ಮ ಮಾವನು ನನ್ನ ಮೇಲೆ ದೋಷಾರೋಪಣೆಯನ್ನು ಮಾಡಿದನು. ಇದು ನನಗೆ ವಿಷಾದವನ್ನುಂಟುಮಾಡಿದ್ದರಿಂದ, ನಾನು ಬೇರೆ ಬಿಡಾರಕ್ಕೆ ಹೊರಟುಹೋದೆನು.

**ಕಲಾವತಿ**—ಕಾಮಮೋಹಿನಿಯೆಲ್ಲಿರುವಳು?- ಬಲ್ಲೆಯಾ?

**ಪರಂತಪ**—ಬಲ್ಲೆನು; ಆದರೆ ಅದು ಈಗ ಹೇಳತಕ್ಕುದಲ್ಲ.

**ಕಲಾವತಿ**—ಅದನ್ನು ತಿಳಿದುಕೊಳ್ಳಬೇಕೆಂಬ ಅಭಿಪ್ರಾಯವು ನನಗಿಲ್ಲ. ಅನುರೂಪನಾದ ಪತಿಯನ್ನು ಸೇರಿ ಅವಳು ಇಲ್ಲಿಂದ ಹೊರಟು ಹೋಗಿ ಸುಖವಾಗಿ ಬಾಳಲಿ ಎಂಬುದೇ ನನ್ನ ಮುಖ್ಯಾಶಯವು.

**ಪರಂತಪ**—ಹೀಗೆ ನೀನು ಬಯಸುವುದಕ್ಕೆ ಕಾರಣವೇನು ?

**ಕಲಾವತಿ**—ಬೇರೆ ಯಾವ ಕಾರಣವೇಕೆ? ಅವಳಿಗೆ ಶಂಬರನಲ್ಲಿ ಸ್ವಲ್ಪವೂ ಅನುರಾಗವಿಲ್ಲ ; ಅವಳ ತಂದೆಯು ಅವಳನ್ನು ಶಂಬರನಿಗೇ ಕೊಟ್ಟು ವಿವಾಹಮಾಡಬೇಕೆಂದಿದ್ದಾನೆ. ಅದು ಅವಳಿಗೆ ಸರ್ವಾತ್ಮನಾ ಇಷ್ಟವಿಲ್ಲ.

**ಪರಂತಪ**—ಹಾಗಾದರೆ, ನಿನಗೆ ಶಂಬರನನ್ನು ವರಿಸುವುದರಲ್ಲಿ ಇಷ್ಟವುಂಟೋ ?

**ಕಲಾವತಿ**—ನನಗೇನೋ ಇಷ್ಟವುಂಟು. ನಮ್ಮ ಮಾವನೂ ಅವನನ್ನು ಬಹಳವಾಗಿ ಶ್ಲಾಘಿಸಿರುವನು.

**ಪರಂತಪ**—ಹಾಗಾದರೆ ನಿಶ್ಚಿಂತಳಾಗಿರು. ಕಾಮಮೋಹಿನಿಯು ಶಂಬರನನ್ನು ಎಂದಿಗೂ ಒಪ್ಪತಕ್ಕವಳಲ್ಲ. ನೀನು ಸರ್ವಪ್ರಯತ್ನದಿಂದಲೂ ಅವನಿಗೆ ಅನುರಾಗವುಂಟಾಗುವಂತೆ ಮಾಡಿಕೋ. ಕಾಮಮೋಹಿನಿಯು ಎಂದಿಗೂ ನಿನ್ನ ಪ್ರಯತ್ನವನ್ನು ಮುರಿಯತಕ್ಕವಳಲ್ಲ; ಇನ್ನೂ ಬೇಕಾದ ಸಹಾಯವನ್ನು ಮಾಡಿಕೊಡುವಳು.

**ಕಲಾವತಿ**—ಹಾಗಿದ್ದರೆ, ಆ ವಿಷಯದಲ್ಲಿ ನಾನು ಪ್ರಯತ್ನಿಸುವೆನು. ನಿಮ್ಮಿಬ್ಬರ ಸಹಾಯದಿಂದಲೇ ಈ ಕೆಲಸವು ನಡೆಯಬೇಕಾಗಿರುವುದು. ನೀನೇ ಕಾಮಮೋಹಿನಿಗೆ ಅನುರೂಪನಾದ ವರನು. ನಿಮ್ಮ ವಿವಾಹಕ್ಕೆ ತಕ್ಕ ಸಹಾಯವನ್ನು ಕೈಲಾದಮಟ್ಟಿಗೂ ನಾನು ಮಾಡುವೆನು. ನನ್ನ ಮಾವನಾದರೋ ಬೆಳಗ್ಗೆ ಏಳುಘಂಟೆಯಮೇಲೆ ಏಳುವನು. ನಾನು ಐದುಘಂಟೆಗೆ ಮೊದಲೇ ನಿತ್ಯವೂ ಎದ್ದು ವ್ಯಾಯಾಮವ್ಯಾಜದಿಂದ ಇಲ್ಲಿಗೆ ಬರುವೆನು. ಈ ಯೆರಡು ವಿವಾಹಗಳು ನಡೆಯುವವರೆಗೂ, ನನ್ನಿಂದಾಗಬೇಕಾದ ಸಹಾಯ ಯಾವುದಿದ್ದರೂ ನಡೆಸಿಕೊಡುವೆನು. ನಿತ್ಯವೂ ಈ ಹೊತ್ತಿಗೆ ಸರಿಯಾಗಿ ನೀನು ಬಂದರೆ ಇಲ್ಲಿ ಸಿಕ್ಕುವೆನು.

**ಪರಂತಪ**—ನೀನು ನಮ್ಮಲ್ಲಿಟ್ಟಿರುವ ಪ್ರೀತಿಗಾಗಿ ನಾವು ಬಹಳ ಕೃತಜ್ಞರಾಗಿರುತ್ತೇವೆ. ಆದರೆ, ನಿನ್ನ ನಿಸರ್ಗವಾದ ಈ ಪ್ರೀತಿಯೇ ನಮ್ಮ

ಲ್ಲಿರುವ ರಹಸ್ಯಗಳನ್ನೆಲ್ಲ ಉದ್ಘಾಟಿಸುವಂತೆ ಪ್ರೇರಿಸುವುದು. ನಿಜಸ್ಥಿತಿಯನ್ನು ಹೇಳುವೆನು. ನನಗೂ ಕಾಮಮೋಹಿನಿಗೂ ವಿವಾಹವು ನೆರವೇರಿಹೋಯಿತು. ನಾವಿಬ್ಬರೂ ನಿಮ್ಮ ವಿವಾಹಕ್ಕೆ ತಕ್ಕ ಸಹಾಯವನ್ನು ಮಾಡುವುದರಲ್ಲಿ ಸಿದ್ಧರಾಗಿರುತ್ತೇವೆ. ಆದರೆ, ನಿನಗೆ ಯಾವ ಕ್ಲೇಶಗಳು ಬಂದಾಗ್ಯೂ ಧೈರ್ಯಗೆಡದಿರು. ಹೋಗು ; ಪುನಃ ನಾನು ನಿನ್ನನ್ನು ಕಾಣುವೆನು. (ಎಂದು ಹೇಳಿ, ಪರಂತಪನು ಹೊರಟುಹೋದನು.)

ಮಾವನ ಮರಣವಾರ್ತೆಯನ್ನು ಕೇಳಿ ಇವಳು ಸಂಕಟಪಡುವಳೆಂದು ತಿಳಿದು, ಅವಳಿಗೆ ಧೈರ್ಯವನ್ನು ಹೇಳಿ, ಪರಂತಪನು ಭೋಜನಶಾಲೆಗೆ ಹೋದನು. ಅಷ್ಟರಲ್ಲಿಯೇ ಅಲ್ಲಿಗೆ ಅರ್ಥಪರನೂ ಬಂದನು.

**ಪರಂತಪ**—ಓಹೋ ! ನಿನ್ನನ್ನೇ ಇದಿರುನೋಡುತ್ತಿದ್ದೆನು. ಯಾವಾಗ ಬಂದೆ ?

**ಅರ್ಥಪರ**—ಈಗತಾನೆ ಬಂದೆನು. ಅದೇನು- ಅಷ್ಟು ಆತುರದಿಂದ ನನ್ನನ್ನು ನಿರೀಕ್ಷಿಸಬೇಕಾದ ಆವಶ್ಯಕ ?

**ಪರಂತಪ**—ಅಂತಹುದೇನೂ ಇಲ್ಲ. ನೀನು ಬಹಳ ದಿವಸ ಇಲ್ಲಿ ನಿಲ್ಲಬೇಕಾದ ಆವಶ್ಯಕವೂ ಇಲ್ಲ. ಮಾಧವನು ಬರೆದಿಟ್ಟಿರುವ ಉಯಿಲನ್ನು ರಿಜಿಸ್ಟರು ಮಾಡಿಸಿಕೊಟ್ಟು ನೀನು ಹೊರಟುಹೋಗಬಹುದು.

**ಅರ್ಥಪರ**—ಈ ಪಟ್ಟಣದ ರಾಮಣೀಯಕವನ್ನು ನೋಡಿದರೆ, ಇದನ್ನು ಬಿಟ್ಟುಹೋಗುವುದಕ್ಕೇ ಮನಸ್ಸು ಬರುವುದಿಲ್ಲ. ನೀನು ಕೊಡತಕ್ಕ ದ್ರವ್ಯದಿಂದ ಜೀವನಮಾಡಿಕೊಂಡು ಇಲ್ಲಿಯೇ ಇರಬೇಕೆಂದು ನಿಷ್ಕರ್ಷೆ ಮಾಡಿಕೊಂಡಿದ್ದೇನೆ.

**ಪರಂತಪ**—ಬಹಳ ಸಂತೋಷ. ಈ ವುಯಿಲನ್ನು ರಿಜಿಸ್ಟರ್ ಮಾಡಿಸಿಕೊಂಡು ಬರೋಣ ; ಬಾ. ಆ ಕೆಲಸವನ್ನು ಮುಗಿಯಿಸಿಕೊಂಡು ನಾನು ರತ್ನಾಕರಕ್ಕೆ ಹೋಗಿ ಅದನ್ನು ನೋಡಿಕೊಂಡು ಬರಬೇಕೆಂದಿದ್ದೇನೆ.

**ಅರ್ಥಪರ**—ನೀನೊಬ್ಬನೇ ಹೊರಡುವೆಯಾ ?

**ಪರಂತಪ**—ನೀನೂ ಬರುವುದಾದರೆ ನನಗೆ ಬಹಳ ಸಂತೋಷ.

**ಅರ್ಥಪರ**—ಅದರ ವಿಷಯವಾಗಿ ನಾನು ಚಿತ್ರವಿಚಿತ್ರವಾದ ಕಥೆಗಳನ್ನು ಕೇಳಿರುವೆನು. ಅದನ್ನು ಪ್ರತ್ಯಕ್ಷವಾಗಿ ನೋಡಿಕೊಂಡು ಬರಬೇಕೆಂಬ ಕುತೂಹಲವು ನನಗೆ ಬಹಳವಾಗಿರುತ್ತದೆ.

**ಪರಂತಪ**—ಸರಿ, ಹಾಗಾದರೆ ನಾವಿಬ್ಬರೂ ಹೋಗೋಣ.

ಹೀಗೆಂದು ನಿಷ್ಕರ್ಷಿಸಿಕೊಂಡು, ಸ್ನಾನಭೋಜನಾದಿಗಳನ್ನು ತೀರಿಸಿಕೊಂಡು, ರಿಜಿಸ್ಟ್ರಾರ್ ಆಫೀಸಿಗೆ ಹೊರಟರು. ಇವರು ಹೋಗಿ ನೋಡಿದಾಗ, ಅಲ್ಲಿನ ನೌಕರರು ಯಾರೂ ಬಂದಿರಲಿಲ್ಲ. ಅಲ್ಲಿನ ಅಧಿಕಾರಿ ಮಾತ್ರ ಬಂದಿದ್ದನು. ಅರ್ಥಪರನ ಹೇಳಿಕೆಯಮೇಲೆ, ಆ ವುಯಿಲನ್ನು ಅಲ್ಲಿನ ಅಧಿಕಾರಿಯ ವಶಕ್ಕೆ ಕೊಟ್ಟು, ಅದರ ಪೂರ್ವಾಪರಗಳನ್ನು ತಿಳಿಸಿ, ಪುನಃ ಬರುವುದಾಗಿ ಹೇಳಿ ಇಬ್ಬರೂ ಹೊರಟುಹೋದರು. ಅಷ್ಟರೊಳಗಾಗಿ ಸುಮಿತ್ರನ ಶವವು ಪಟ್ಟಣಕ್ಕೆ ತರಲ್ಪಟ್ಟಿತು. ಪರಂತಪ ಶಂಬರರಿಗೆ ನಡೆದ ಯುದ್ಧದ ವೃತ್ತಾಂತವು, ಎಲ್ಲೆಲ್ಲಿಯೂ ಪ್ರಕಟವಾಯಿತು. ಸುಮಿತ್ರನ ಕೊಲೆಗೆ ಪರಂತಪನೇ ಕಾರಣಭೂತನೆಂದು ಜನಗಳೆಲ್ಲ ಅಲ್ಲಲ್ಲಿ ಆಡಿಕೊಳ್ಳುತಿದ್ದರು. ಇದನ್ನು ಕೇಳಿ, ಸಮರಸಿಂಹನೇ ಮೊದಲಾದ ಪಂಚಾಯಿತರೆಲ್ಲರೂ ನಿಜಸ್ಥಿತಿಯನ್ನು ಪ್ರಕಟಪಡಿಸಿದರು. ಆಗ ಜನರಿಗೆಲ್ಲ ಶಂಬರನ ವಿಷಯದಲ್ಲಿ ದ್ವೇಷವು ಪ್ರಬಲವಾಗಿ ಕಂಡುಬಂದಿತು. ಶಂಬರನು ಸುಮಿತ್ರನ ಉತ್ತರಕ್ರಿಯೆಗಳನ್ನು ಮುಗಿಸಿಕೊಂಡು ಆ ಪಟ್ಟಣದಲ್ಲಿದ್ದ ಒಂದಾನೊಂದು ವಿಹಾರಶಾಲೆಗೆ ಹೋಗಲು, ಅಷ್ಟರೊಳಗಾಗಿ ಅಲ್ಲಿಗೆ ಅರ್ಥಪರನೂ ಬಂದನು. ಇಬ್ಬರಿಗೂ ಸ್ವಾಗತಸಂಭಾಷಣೆಗಳೆಲ್ಲ ನಡೆದುವು.

**ಶಂಬರ**—ಓಹೋ! ಮಿತ್ರನೇ! ಸಕಾಲಕ್ಕೆ ನೀನು ಬಂದೆ.

**ಅರ್ಥಪರ**—ನಾನು ಎಂದಿಗೂ ಕ್ಲಪ್ತಕಾಲವನ್ನು ಮೀರತಕ್ಕವನಲ್ಲ. ಇದೇನು- ಕೈಗೆ ಬಟ್ಟೆಯನ್ನು ಸುತ್ತಿಕೊಂಡಿರುವೆ?

**ಶಂಬರ**—ಪಾಪಿಯಾದ ಪರಂತಪನೊಡನೆ ನಾನು ಯುದ್ಧವನ್ನು ಮಾಡಬೇಕೆಂದಿದ್ದ ಸಂಗತಿಯನ್ನು ನಿನಗೆ ಮೊದಲೇ ತಿಳಿಸಿದ್ದೆನಷ್ಟೆ! ಇದೇ ಅದರ ಫಲ!

**ಅರ್ಥಪರ**—ಓಹೋ! ಇದಕ್ಕಾಗಿ ನಾನು ಬಹಳ ವಿಷಾದಿಸುತ್ತೇನೆ. ನಿಮ್ಮ ಕಲಹದಲ್ಲಿ ಅವನಿಗೆ ಯಾವ ಅಪಾಯವೂ ಸಂಭವಿಸಿದಂತೆ ಕಾಣುವುದಿಲ್ಲವಲ್ಲ!

**ಶಂಬರ**—ಅವನಿಗೆ ದೈವವು ಅನುಕೂಲವಾಗಿರುವುದು. ನನಗೆ ಏಟು ಬಿದ್ದುದಲ್ಲದೆ, ಆ ಪರಂತಪನಿಗೋಸ್ಕರ ಪ್ರಯೋಗಿಸಿದ ಗುಂಡು ಸುಮಿತ್ರನಿಗೆ ತಗುಲಿ ಆತನೂ ಮೃತನಾದನು.

**ಅರ್ಥಪರ**—ಆತನ ಮರಣವು ನಿನಗೆ ಅಭಿಮತವಾಗಿಯೇ ಇರುವುದಷ್ಟೆ! ಇನ್ನು ಅವನ ಆಸ್ತಿಯೆಲ್ಲ ನಿನಗೇ ಸೇರುವುದು. ಇದಕ್ಕಾಗಿ ನಾನು ಸಂತೋಷಿಸುವೆನು.

**ಶಂಬರ**—ಅದೇನೋ ನಿಜವೆ! ಆದರೆ, ಸುಮಿತ್ರನು, ತನ್ನ ಆಸ್ತಿಯನ್ನೆಲ್ಲ ಕಲಾವತಿಯ ಹೆಸರಿಗೆ ಉಯಿಲು ಬರೆದಿರುವುದಾಗಿಯೂ, ಅವಳನ್ನು ವಿವಾಹವಾದರೆ ಅವನ ಆಸ್ತಿಯನ್ನು ಅನುಭವಿಸಬಹುದೆಂಬುದಾಗಿಯೂ ನನಗೆ ಹೇಳಿದ್ದನು.

**ಅರ್ಥಪರ**—ಹಾಗೋ! ಹಾಗಾದರೆ ಈ ವಿಷಯವನ್ನು ಯಾರಿಗೂ ಹೇಳಬೇಡ. ಆ ವುಯಿಲನ್ನು ಉಪಾಯಾಂತರದಿಂದ ತೆಗೆದು ಸುಟ್ಟುಬಿಡು. ಅವನ ಆಸ್ತಿಯೆಲ್ಲ ನಿನ್ನ ವಶವಾಗುವುದು.

**ಶಂಬರ**—ಹಾಗಾದರೆ, ಈ ಕೆಲಸವು ಮೊದಲು ಮಾಡತಕ್ಕುದಾಗಿದೆ. ಅದು ಹಾಗಿರಲಿ; ಇನ್ನೇನು ಸಮಾಚಾರ?

**ಅರ್ಥಪರ**—ಪರಂತಪನಿಗೂ ಕಾಮಮೋಹಿನಿಗೂ ಉಪವನದಲ್ಲಿ ನಡೆದ ಸಂಭಾಷಣೆಯನ್ನು ನಿನಗೆ ಮೊದಲೇ ತಿಳಿಸಿರುವೆನಷ್ಟೆ! ಈಚೆಗೆ ಆಕೆಯು ಸತ್ಯಶರ್ಮನ ಮನೆಯಲ್ಲಿರುವುದಾಗಿ ಕೇಳಿ, ವೇಷಾಂತರದಿಂದ ಹೋಗಿ, ಅವನ ಮನೆಯನ್ನು ಪತ್ತೆಮಾಡಿ, ಅಲ್ಲಿಯೇ ತಿರುಗಾಡುತ್ತಿದ್ದೆನು. ಅಷ್ಟರಲ್ಲಿ ಪರಂತಪನು ಬಂದು ಆ ಮನೆಯನ್ನು ಪ್ರವೇಶಿಸಿದನು. ಕೂಡಲೇ ಸತ್ಯಶರ್ಮ ಮೊದಲಾದವರು ಈತನನ್ನು ಕರೆದುಕೊಂಡು ಹೋಗಿ ಕೂರಿಸಿಕೊಂಡು, ಅನೇಕ ವಿಷಯಗಳನ್ನು ಕುರಿತು ಮಾತನಾಡುತಿದ್ದರು.

**ಶಂಬರ**—ಶಹಬಾಸ್! ಮಿತ್ರನೇ!! ಶಹಬಾಸ್!!! ನೀನು ಬಹಳ ಚತುರನು. ಇದಕ್ಕಾಗಿ ನಿನಗೆ ನಾನು ಎಷ್ಟು ಬಹುಮಾನ ಮಾಡಿದಾಗ್ಯೂ ಕಡಮೆಯಾಗಿರುವುದು. ಇದಕ್ಕೆ ತಕ್ಕಂತೆ ನಾನು ಕೈಲಾದಮಟ್ಟಿಗೂ ಕೃತಜ್ಞತೆಯನ್ನು ತೋರಿಸುವೆನು. ಅವರ ಸಂಭಾಷಣೆಯಲ್ಲಿ ನೀನು ಗ್ರಹಿಸಿದ ಸಾರಾಂಶಗಳನ್ನು ಹೇಳು.

**ಅರ್ಥಪರ**—ಇನ್ನೇನೂ ಇಲ್ಲ; ಸತ್ಯಶರ್ಮನು ರತ್ನಾಕರದ ಮಾಹಾತ್ಮ್ಯವನ್ನೂ ಅಲ್ಲಿನ ಭಯಾವಹವಾದ ಸಂಗತಿಗಳನ್ನೂ ವಿಸ್ತಾರವಾಗಿ ಹೇಳುತ್ತಿದ್ದನು.

**ಶಂಬರ**—ಅದಕ್ಕೆ ಪರಂತಪನೇನು ಹೇಳಿದನು ?

**ಅರ್ಥಪರ**—ಅದನ್ನು ವಿಸ್ಮಯದಿಂದ ಕೇಳುತ್ತ ಇದ್ದರೂ-ಭೀತಿಪಡದೆ, ತಾನು ಕೆಲವು ದಿವಸಗಳವರೆಗೂ ರತ್ನಾಕರದಲ್ಲೇ ವಾಸಮಾಡುತ್ತಿರುವು ದಾಗಿ ಹೇಳಿದನು.

**ಶಂಬರ**—ಅದಾಗತಕ್ಕುದಲ್ಲ. ರತ್ನಾಕರವು ಇವನ ವಶವಾಗದಂತೆ ಮಾಡತಕ್ಕ ಕೆಲಸವು ನನ್ನದಾಗಿರಲಿ. ಇನ್ನೇನು ವಿಶೇಷ ?

**ಅರ್ಥಪರ**—ಆ ದಿವಸವೇ ಕಾಮಮೋಹಿನಿಗೂ ಪರಂತಪನಿಗೂ ವಿಧಿ ಪೂರ್ವಕವಾಗಿ ವಿವಾಹವು ನಡೆಯಿತು,

ಈ ಮಾತನ್ನು ಕೇಳಿದಕೂಡಲೆ, ಶಂಬರನು ಮೂರ್ಛಿತನಾಗಿ, ಸ್ವಲ್ಪ ಹೊತ್ತಿನಮೇಲೆ ಚೇತರಿಸಿಕೊಂಡು, ಮಿತಿಮೀರಿದ ಕೋಪಾವೇಶದೊಡನೆ, ಅರ್ಥಪರನನ್ನು ನೋಡಿ 'ಎಲೈ ಕಪಟಿಯೇ ! ನೀನು ನನಗೆ ಬಹಳ ಮೋಸ ವನ್ನು ಮಾಡಿದೆ. ಇವರ ವಿವಾಹ ಪ್ರಾರಂಭಕಾಲದಲ್ಲಿ ನೀನು ನನಗೇಕೆ ತಿಳಿಸದೆ ಹೋದೆ ? ನಾನು ಆ ಕ್ಷಣದಲ್ಲೇ ವಿವಾಹವನ್ನು ನಿಲ್ಲಿಸುತಿದ್ದೆನು ಈಗ ನನ್ನ ಪ್ರಯತ್ನಗಳೆಲ್ಲವೂ ನಿಷ್ಫಲವಾದುವಲ್ಲಾ ! ಅವರಿಬ್ಬರಿಗೂ ವಿವಾಹವಾದುದು ನಿಜವೇ ? ನೀನು ನೋಡಿದೆಯಾ ? ' ಎಂದನು.

**ಅರ್ಥಪರ**—ಅಯ್ಯಾ ! ಕೋಪಿಸಬೇಡ; ಕೇಳು. ವಿವಾಹ ಪ್ರಾರಂಭ ದಲ್ಲೇ ನಾನು ನಿನಗೆ ತಿಳಿಸಬೇಕೆಂದು ಬಂದೆನು. ಆಗ ನೀನು ಮನೆಯಲ್ಲಿರ ಲಿಲ್ಲ. ಒಂದು ಚೀಟಿಯನ್ನು ಬರೆದು ನಿನ್ನಮೇಜಿನಮೇಲೆ ಇಟ್ಟು, ಮುಂದಿನ ಸಂಗತಿಗಳನ್ನು ಪರೀಕ್ಷಿಸುವುದಕ್ಕಾಗಿ ನಾನು ಹೊರಟುಹೋದೆನು. ಇವರಿ ಬ್ಬರ ವಿವಾಹವೂ ನಿರ್ವಿಘ್ನವಾಗಿ ನೆರವೇರಿತು. ನೆರೆಹೊರೆಯವರೆಲ್ಲರೂ ಬಂದಿದ್ದರು. ವಿವಾಹದ ಕರಾರೂ ಬರೆಯಲ್ಪಟ್ಟಿತು. ಅದನ್ನು ಸತ್ಯಶರ್ಮನೇ ಬರೆದು, ಇನ್ನೂ ತನ್ನ ಬಳಿಯಲ್ಲೇ ಇಟ್ಟುಕೊಂಡಿರುವನು.

ಶಂಬರನು ಈ ಮಾತನ್ನು ಕೇಳಿದಕೂಡಲೆ ತನ್ನ ಮೇಜನ್ನು ಹುಡು ಕಲು, ಅರ್ಥಪರನು ಬರೆದಿಟ್ಟಿದ್ದ ಕಾಗದವು ಸಿಕ್ಕಿತು. ಇದನ್ನು ನೋಡಿ, ತನ್ನನ್ನೇ ತಾನು ನಿಂದಿಸಿಕೊಂಡು " ಎಲೈ ಅರ್ಥಪರನೇ ! ಈಗ ಕೆಲಸವು ಕೈಮೀರಿತು. ಈ ವಿವಾಹದ ಸಂಗತಿಯು ಯಾರಿಗೂ ತಿಳಿಯಕೂಡದು. ಪರಂತಪನನ್ನು ಕೂಡಲೇ ಕೊಂದು, ಕಾಮಮೋಹಿನಿಗೆ ನನ್ನಲ್ಲಿ ಅನುರಾಗ

ವುಂಟಾಗುವಂತೆ ಮಾಡಿಕೊಳ್ಳುವೆನು ಈ ವಿಷಯದಲ್ಲಿ ನಿನ್ನ ಅಭಿಪ್ರಾಯ ವೇನು ? " ಎಂದನು.

**ಅರ್ಥಪರ**—ಇದು ಕಷ್ಟಸಾಧ್ಯವು. ಆ ವಿವಾಹದ ಸಂಗತಿಯು ನೆರೆ ಹೊರೆಯವರಾದ ಐದಾರು ಮನೆಯವರಿಗೆ ತಿಳಿದುಹೋಗಿದೆ.

**ಶಂಬರ**—ಹಾಗಾದರೆ, ಅವನ್ನು ಬಲ್ಲವರನ್ನೆಲ್ಲ ಒಟ್ಟಿಗೆ ಕೊಂದುಬಿಟ್ಟರೆ, ನನ್ನ ಮನೋರಥವು ಸಿದ್ಧಿಸುವದಲ್ಲವೆ ?

**ಅರ್ಥಪರ**—ಅದು ಹೇಗೆ ಸಾಧ್ಯವಾಗುವುದು ? ಪರಂತಪನು ಸಾಧಾರಣನಲ್ಲ. ಈ ನಮ್ಮ ಪ್ರಯತ್ನವೇನಾದರೂ ಪ್ರಕಟವಾದರೆ, ನಮ್ಮನ್ನು ಮರಣದಂಡನೆಗೆ ಗುರಿಮಾಡುವನು.

**ಶಂಬರ**—ಹೆದರಬೇಡ, ನಿನಗೆ ಹತ್ತುಲಕ್ಷ ವರಹಗಳನ್ನು ಕೊಡುವೆನು. ನನ್ನ ಪ್ರಯತ್ನಕ್ಕೆ ಸಹಾಯಕನಾಗಿರು.

**ಅರ್ಥಪರ**—ಅಯ್ಯಾ ! ಶಂಬರ ! ಹಾಗಾದರೆ, ನೀನು ಕೊಡತಕ್ಕ ಹಣವನ್ನು ಮೊದಲು ಕೊಡಬೇಕು ಈ ಪ್ರಯತ್ನದಲ್ಲಿ ನಾನು ಒಂದು ವೇಳೆ ಸಿಕ್ಕಿಕೊಂಡರೂ, ಲಂಚವನ್ನಾದರೂ ಕೊಟ್ಟು ಬಿಡಿಸಿಕೊಂಡು ಬರಬೇಕಲ್ಲವೆ ! ಆದುದರಿಂದ, ನೀನು ಮೊದಲು ಹಣವನ್ನು ಕೊಟ್ಟರೆ ಸಹಾಯಕನಾಗಿರುವೆನು, ಇಲ್ಲದಿದ್ದರೆ ನನ್ನನ್ನು ಅಪೇಕ್ಷಿಸಬೇಡ.

ಕೂಡಲೆ ಶಂಬರನು ಆ ಹಣಕ್ಕಾಗಿ ತನ್ನ ವಶದಲ್ಲಿದ್ದ ಸುಮಿತ್ರನ ಅಮೂಲ್ಯವಾದ ಕೆಲವು ರತ್ನಾಭರಣಗಳನ್ನು ಕೊಡಲು, ಅರ್ಥಪರನು ಅವನ್ನೆಲ್ಲ ತಗೆದುಕೊಂಡು ಹೋಗಿ ಮನೆಯಲ್ಲಿ ಬಚ್ಚಿಟ್ಟು ಬಂದು " ಅಯ್ಯಾ ! ಮಿತ್ರನೆ ! ಇನ್ನು ನೀನು ಹೇಳಿದ ಕೆಲಸವನ್ನು ಮಾಡುವುದರಲ್ಲಿ ಬದ್ಧನಾಗಿರುತ್ತೇನೆ. ಆದರಿಂದ ಯಾವ ವಿಪತ್ತುಗಳು ಬಂದರೂ ಅನುಭವಿಸುವುದಕ್ಕೂ ಸಿದ್ಧನಾಗಿದ್ದೇನೆ. " ಎಂದು ಹೇಳಿದನು.

**ಶಂಬರ**—ನೀನು ಮನಃಪೂರ್ವಕವಾಗಿ ಮಾಡುವೆಯೋ ?

**ಅರ್ಥಪರ**—ಸತ್ಯವಾಗಿಯೂ ನೀನು ಏನು ಹೇಳಿದರೂ ಮಾಡುವೆನು, ಹೇಳು.

**ಶಂಬರ**—ಹಾಗಾದರೆ ಆ ನೀಚನಾದ ಪರಂತಪನನ್ನು ಕೊಲ್ಲಬೇಕು.

**ಅರ್ಥಪರ**—ಇದು ಸಾಧ್ಯವಲ್ಲ. ಇದಕ್ಕೆ ಮಾತ್ರ, ನಾನು ಪ್ರಯತ್ನಿಸಿದರೆ ನನ್ನ ತಲೆ ಹೋಗುವುದು,

**ಶಂಬರ**—ಅದೂ ಬೇಡ. ಅವನನ್ನು ಹಿಡಿದುತಂದು ಸೆರೆಯಲ್ಲಿಟ್ಟು ನಾನಾವಿಧವಾದ ಹಿಂಸೆಯನ್ನುಂಟುಮಾಡಿ ಕಾಮಮೋಹಿನಿಯನ್ನೂ ಆ ವಿವಾಹದ ಕರಾರನ್ನೂ ಸ್ವಾಧೀನಪಡಿಸಿಕೊ. ಇದನ್ನು ನೋಡಲಾರದೆ, ಅವನು ತಾನಾಗಿಯೇ ಸಾಯುವನು. ಅವನು ಸಾಯದೆ ಇದ್ದರೆ ಅವನನ್ನು ಕೊಂದುಬಿಡು.

**ಅರ್ಥಪರ**—ಪ್ರಾಣಹಿಂಸೆಗೆ ಮಾತ್ರ ಎಂದಿಗೂ ನಾನು ಒಪ್ಪತಕ್ಕವನಲ್ಲ. ಅವನನ್ನು ಉಪಾಯದಿಂದ ಹಿಡಿದು ಯಾವಜ್ಜೀವವೂ ಸೆರೆಯಲ್ಲಿಡುತ್ತೇನೆ. ಮಾಧವನ ಉಯಿಲನ್ನು ಅಪಹರಿಸಿ ರತ್ನಾಕರವನ್ನು ನಿನ್ನ ಸ್ವಾಧೀನಕ್ಕೆ ಬರುವಂತೆಯೂ ಮಾಡುತ್ತೇನೆ. ಕಾಮಮೋಹಿನಿಗೆ ಪರಂತಪನು ಸತ್ತನೆಂದು ಪ್ರತ್ಯಯವನ್ನುಂಟುಮಾಡಿ, ಅವಳಿಗೆ ಪುನಃ ನಿನ್ನೊಡನೆ ವಿವಾಹವಾಗುವಂತೆಯೂ ಮಾಡಬಹುದು. ಇಷ್ಟಲ್ಲದೆ, ಪ್ರಾಣಹಿಂಸೆಗೆ ಪ್ರಯತ್ನಪಡುವ ಪಕ್ಷದಲ್ಲಿ, ನಿನ್ನ ಸಹವಾಸವೇ ನನಗೆ ಬೇಡ. ಇದು ನಿನಗೆ ಅಭಿಮತವಲ್ಲದಿದ್ದರೆ, ನೀನು ಕೊಟ್ಟಿರುವ ಆಭರಣಗಳನ್ನೆಲ್ಲ ಹಿಂದಿರುಗಿ ಕೊಟ್ಟು ಬಿಡುವೆನು.

ಇದನ್ನು ಕೇಳಿ ಶಂಬರನು ಭಗ್ನಮನೋರಥನಾದುದಲ್ಲದೆ, ತನ್ನ ಪ್ರಯತ್ನವನ್ನು ಹೊರಪಡಿಸುವನೋ ಏನೋ ಎಂದು ಬಹಳ ಭೀತಿಯನ್ನು ಹೊಂದಿ, ಈ ಕೊಲೆಯ ವಿಷಯವಾಗಿ ಈತನೊಡನೆ ಪ್ರಸ್ತಾವಮಾಡಬಾರದಾಗಿತ್ತೆಂದುಕೊಂಡು, ಮುಂದೆ ತನ್ನ ಯಾವ ಕೊಲೆಯ ವಿಷಯವಾದ ಪ್ರಯತ್ನವನ್ನೂ ಇವನೊಡನೆ ಹೇಳಬಾರದೆಂದು ನಿಷ್ಕರ್ಷಿಸಿಕೊಂಡನು.

**ಅರ್ಥಪರ**—ಅಯ್ಯಾ! ಇದೇನು ಯೋಚಿಸುತ್ತಿರುವೆ?

**ಶಂಬರ**—ಏನೂ ಇಲ್ಲ; ನೀನು ಹೇಳಿದಂತೆಯೇ ಮಾಡುವುದು ಯುಕ್ತ. ಪರಂತಪನನ್ನು ಕೊಲ್ಲುವುದಕ್ಕಿಂತ ಸೆರೆಯಲ್ಲಿಡುವುದೇ ಮೇಲು. ಇನ್ನು ಮುಂದೆ ನಿನ್ನ ಇಷ್ಟದಂತೆ ನಡೆಸೋಣ. ಮಾಧವನ ಉಯಿಲಿನ ವಿಷಯದಲ್ಲಿ ಹೇಗೆ ಮಾಡೋಣ?

**ಅರ್ಥಪರ**—ಈ ದಿನ ಹನ್ನೊಂದುಘಂಟೆಯ ವೇಳೆಯಲ್ಲಿ ಆ ವುಯಿಲನ್ನು ರಿಜಿಸ್ಟರ್ ಮಾಡಿಸುವುದಕ್ಕಾಗಿ ಹೋಗಿದ್ದೆವು ಇದಕ್ಕೆ ಮೊದಲೇ ನಾನು ಕಛೇರಿಯ ನೌಕರರಿಗೆಲ್ಲ ಅಲ್ಪಸ್ವಲ್ಪ ದ್ರವ್ಯವನ್ನು ಕೊಟ್ಟು, ಆ ದಿನ ಸಾವಕಾಶಮಾಡಿಕೊಂಡು ಬರುವಂತೆ ಹೇಳಿದ್ದನು. ಇದರಂತೆ ಅವರೊಬ್ಬರೂ ಕಾಲಕ್ಕೆ ಸರಿಯಾಗಿ ಬಂದಿರಲಿಲ್ಲ. ಅಲ್ಲಿನ ಅಧಿಕಾರಿ ಮಾತ್ರ ಬಂದಿದ್ದನು. ಆ ಪರಂತಪನೂ ನಾನೂ ಹೋಗಿ ಅವನ ವಶಕ್ಕೆ ಉಯಿಲನ್ನು ಕೊಟ್ಟೆವು. ಪರಂತಪನ ಪ್ರತ್ಯಯಾರ್ಥವಾಗಿ, ನಾನು ಆ ವುಯಿಲಿನ ಪೂರ್ವಾಪರಗಳನ್ನೆಲ್ಲ ಅಲ್ಲಿನ ಅಧಿಕಾರಿಗೆ ತಿಳಿಸಿ, ಪುನಃ ಬರುವುದಾಗಿ ಹೇಳಿ, ಅವನನ್ನು ಕರೆದುಕೊಂಡು ಹೊರಟುಬಂದೆನು. ಈಗ ಒಂದುಲಕ್ಷ ರೂಪಾಯಿಗಳಾದರೆ, ಅದನ್ನು ರಿಜಿಸ್ಟ್ರಾರಿಗೆ ಕೊಟ್ಟು ಆ ಕಾಗದವನ್ನು ತೆಗೆದುಕೊಂಡು ಬರಬಹುದು.

**ಶಂಬರ**—ನಗದು ಹಣವು ನನ್ನ ಹತ್ತಿರದಲ್ಲಿಲ್ಲ. ಜವಾಹಿರಿನಗಗಳನ್ನು ಕೊಡುತ್ತೇನೆ. ಇದನ್ನು ಎಲ್ಲಾದರೂ ಇಟ್ಟು ಹಣವನ್ನು ತೆಗೆದುಕೊಂಡು ಹೋಗು (ಎರಡುಲಕ್ಷ ರೂಪಾಯಿ ಬೆಲೆಯುಳ್ಳ ಪದಕವನ್ನು ಕೊಟ್ಟನು)

ಅರ್ಥಪರನು ಅದನ್ನು ತೆಗೆದುಕೊಂಡು ಹೋಗಿ ಬಚ್ಚಿಟ್ಟು, ರಿಜಿಸ್ಟ್ರಾರರ ಬಳಿಗೆ ಹೋಗಿ, ದಾಖಲೆಗೋಸ್ಕರ ಆ ವುಯಿಲು ಬೇಕಾಗಿದೆಯೆಂದು ಹೇಳಿ, ಅದನ್ನು ತಂದು ಶಂಬರನ ವಶಕ್ಕೆ ಕೊಡಲು, ಶಂಬರನು ಅದನ್ನು ಪೆಟ್ಟಿಗೆಯಲ್ಲಿ ಭದ್ರಪಡಿಸಿಟ್ಟನು.

ಅನಂತರ, ಅರ್ಥಪರನು, ಆ ದಿನ ಮಧ್ಯಾಹ್ನಾತ್ಪರ ತಾನು ಪರಂತಪನನ್ನು ರತ್ನಾಕರಕ್ಕೆ ಕರೆದುಕೊಂಡು ಬರುವುದಾಗಿಯೂ, ಅಲ್ಲಿ ತಕ್ಕ ಸನ್ನಾಹಗಳನ್ನು ಮಾಡಿಕೊಂಡಿದ್ದು ಅವನನ್ನು ಹಿಡಿದು ಏಕಾಂತವಾದ ಸ್ಥಳದಲ್ಲಿಡಬೇಕೆಂಬುದಾಗಿಯೂ ಶಂಬರನಿಗೆ ತಿಳಿಸಲು, ಅವನು ಅದಕ್ಕೆ ತಕ್ಕ ಸನ್ನಾಹಗಳನ್ನು ಮಾಡಿಸಿದನು.

## ಅಧ್ಯಾಯ. ೧೦.

ಅರ್ಥಪರನು, ಅಲ್ಲಿಂದ ಪರಂತಪನ ಬಿಡಾರಕ್ಕೆ ಹೋಗಿ, ಆತನನ್ನು ಕರೆದುಕೊಂಡು ರತ್ನಾಕರಕ್ಕೆ ಹೊರಟನು. ಮಾರ್ಗದಲ್ಲಿ ಸತ್ಯಶರ್ಮನ ಮನೆಯು ಸಿಕ್ಕಿತು. ಪರಂತಪನು, ಅರ್ಥಪರನನ್ನು ಮೆಲ್ಲಗೆ ಹೋಗುತ್ತಿರುವಂತೆ ಹೇಳಿ, ತಾನು ಆ ಮನೆಯನ್ನು ಪ್ರವೇಶಿಸಿ, ಸತ್ಯಶರ್ಮನಿಗೂ ತನ್ನ ಪ್ರಿಯೆಯಾದ ಕಾಮಮೋಹಿನಿಗೂ ತನ್ನ ಪ್ರಯಾಣದ ಸಂಗತಿಯನ್ನು ತಿಳಿಸಿದನು. ಅದನ್ನು ಕೇಳಿ, ಕಾಮಮೋಹಿನಿಯು ಭಯಗ್ರಸ್ತೆಯಾಗಿ, ಆತನ ಕೈಯನ್ನು ಹಿಡಿದುಕೊಂಡು "ಇದು ಅಪಾಯಕರವಾದ ಸ್ಥಳ; ಹೋಗಕೂಡದು." ಎಂದು ನಿರ್ಬಂಧಿಸಿ ಪ್ರಾರ್ಥಿಸಿಕೊಳ್ಳಲು, ಪರಂತಪನು "ಎಲೆ ಪ್ರಿಯೆ! ಹೆದರಬೇಡ. ನಾನು ಆಯುಧಪಾಣಿಯಾಗಿರುತ್ತೇನೆ. ನನಗೆ ಯಾವ ಅಪಾಯವೂ ಸಂಭವಿಸುವುದಿಲ್ಲ. ಅಲ್ಲಿ ಜನಗಳಿಗೆ ಉಂಟಾಗಿರುವ ಭಯವೆಲ್ಲ ನಿರರ್ಥಕವಾದುದು. ಅದನ್ನು ನಿನಗೆ ವಾಸಗೃಹವನ್ನಾಗಿ ಮಾಡಬೇಕೆಂದಿದ್ದೇನೆ. ಅದು ವಾಸಕ್ಕೆ ಬಹು ಅನುಕೂಲವಾಗಿದೆ. ಅದರಲ್ಲಿ ಇನ್ನೂ ಕೆಲವು ಬೇಕಾದ ಅನುಕೂಲ್ಯಗಳನ್ನುಂಟುಮಾಡಿ, ನಿಮ್ಮೆಲ್ಲರನ್ನೂ ಅಲ್ಲಿಗೆ ಕರೆಸಿಕೊಳ್ಳುತ್ತೇನೆ. ಹೆದರಬೇಡ." ಎಂದು ಹೇಳಲು, ಸತ್ಯಶರ್ಮನೇ ಮೊದಲಾದವರೆಲ್ಲರೂ ಅವಳಿಗೆ ಧೈರ್ಯಹೇಳಿದರು.

**ಕಾಮಮೋಹಿನಿ**—ಪ್ರಿಯನೇ! ನಿನ್ನ ಧೈರ್ಯ ಸಾಹಸಗಳು ನನಗೆ ಭಯಾವಹಗಳಾಗಿರುವುವು. ಅದು ನಮಗೆ ವಾಸಾರ್ಹವೆಂಬುದರಲ್ಲಿ ನನಗೆ ನಂಬುಗೆ ತೋರುವುದಿಲ್ಲ. ಅಂತೂ, ಆ ಪ್ರದೇಶವು ಅಪಾಯಕರವಾದುದೇ ಸರಿ. ಪುನಃ ನಿನ್ನನ್ನು ನಾನು ನೋಡುವೆನೋ ಇಲ್ಲವೋ ಎಂಬ ಸಂಶಯವೂ ಸಹ ನನ್ನಲ್ಲಿ ನೆಲೆಗೊಂಡಿರುವುದು.

**ಪರಂತಪ**—ಎಲೆ ಪ್ರಿಯೇ! ಇದೇನು-ನೀನೂ ಹೀಗೆ ಹೆದರುವೆ? ಈ ಭಯವು ನಿನಗೆ ಯೋಗ್ಯವಾದುದಲ್ಲ, ನಾಳೆ ಮಧ್ಯಾಹ್ನದೊಳಗಾಗಿ ನಾನು ಇಲ್ಲಿಗೆ ಬರುವೆನು, ನೋಡು.

**ಸತ್ಯಶರ್ಮ**—ಅಯ್ಯಾ! ನೀನು ಬಹು ಜಾಗರೂಕನಾಗಿರು. ಆ ಪ್ರದೇಶವು ಭೂತಪ್ರೇತಾದಿಗಳಿಗೂ ಅನೇಕ ದುರ್ದೇವತೆಗಳಿಗೂ ಆಶ್ರಯವಾಗಿರುವುದೆಂದು ಕೇಳುತ್ತೇನೆ. ಜೋಕೆ ! ಜೋಕೆ !!

**ಪರಂತಪ**—(ನಸುನಕ್ಕು) ಇದೀಗ ಅತ್ಯಾಶ್ಚರ್ಯಕರವಾಗಿದೆ ಭೂತ ಪ್ರೇತ ಪಿಶಾಚಾದಿಗಳು ಯಾವುವಿದ್ದರೂ, ಅವುಗಳನ್ನೆಲ್ಲ ಹೊರಡಿಸಿ ಅದನ್ನು ವಾಸಾರ್ಹವಾಗಿ ಮಾಡುತ್ತೇನೆ ; ಚಿಂತಿಸಬೇಡ. ಆದರೆ, ನಾನು ಬರುವ ವರೆಗೂ ಈ ನನ್ನ ಪ್ರಿಯೆಯನ್ನೂ ನಮ್ಮಿಬ್ಬರ ವಿವಾಹದ ಕರಾರನ್ನೂ ಕಾಪಾಡಿಕೊಂಡಿರು.

**ಸತ್ಯಶರ್ಮ**—ಈ ವಿಷಯದಲ್ಲಿ ನೀನು ಹೆದರದೆ ಧೈರ್ಯವಾಗಿರು ನಾನು ನೋಡಿಕೊಳ್ಳುವೆನು.

**ಪರಂತಪ**—(ತನ್ನ ಕೈಪೆಟ್ಟಿಗೆಯನ್ನು ಕಾಮನೋಹಿನಿಯ ವಶಕ್ಕೆ ಕೊಟ್ಟು) ಪ್ರಿಯೇ ! ಇದರಲ್ಲಿ ೨೦ ಲಕ್ಷ ಪೌನುಗಳ ಬ್ಯಾಂಕು ನೋಟುಗಳಿರುತ್ತವೆ. ಇದನ್ನು ನೀನು ಭದ್ರವಾಗಿಟ್ಟುಕೊಂಡಿರು. ನಿನಗೆ ಬೇಕಾದಷ್ಟನ್ನು ತೆಗೆದುಕೊ. ಸತ್ಯಶರ್ಮಾದಿಗಳಿಗೆ ಬೇಕಾದಷ್ಟು ಖರ್ಚಿಗೆ ಕೊಡು. ಇದರ ವಿನಿಯೋಗದ ವಿಷಯದಲ್ಲಿ ನಿನಗೆ ಸರ್ವಸ್ವಾತಂತ್ರ್ಯವನ್ನೂ ವಹಿಸುವೆನು, ಹೋಗು.

ಅದರ ಬೀಗದಕೈಯನ್ನು ಅವಳ ವಶಕ್ಕೆ ಕೊಟ್ಟು, ಅವರೆಲ್ಲರ ಅನುಮತಿಯನ್ನೂ ತೆಗೆದುಕೊಂಡು, ಕುದುರೆಯನ್ನು ಹತ್ತಿ ಹೊರಟು, ತನ್ನ ನಿರೀಕ್ಷಣೆಯಿಂದಲೇ ಮೆಲ್ಲನೆ ನಡೆಯುತ್ತಿದ್ದ ಅರ್ಥಪರನನ್ನು ಸೇರಿದನು. ಸೂರ್ಯಾಸ್ತಮಯದೊಳಗಾಗಿಯೇ ಕಣಿವೆಗಳ ಮಾರ್ಗವಾಗಿ ರತ್ನಾಕರದ ಕಟ್ಟಡದ ಸಮೀಪಕ್ಕೆ ಸೇರಿ ಅದರ ರಾಮಣೀಯಕವನ್ನು ನೋಡಿ ಮನಸ್ಸಿನಲ್ಲಿ ಅತ್ಯಾಶ್ಚರ್ಯಪಡುತ್ತಿರುವ ಪರಂತಪನು, ಅರ್ಥಪರನನ್ನು ನೋಡಿ "ಅಯ್ಯಾ ! ಇದರ ಅಂದವನ್ನು ನೋಡಿದೆಯಾ ? ಇದನ್ನು ನಿರ್ಮಿಸಿದ ಶಿಲ್ಪಿಯ ಚಾತುರ್ಯವು ಅನ್ಯಾದೃಶವಾದುದೆಂದು ವ್ಯಕ್ತಪಡುವುದು" ಎಂದನು.

**ಅರ್ಥಪರ**—ನಿವಾಸಾರ್ಹವಲ್ಲದ ಈ ಕಟ್ಟಡವು, ನನಗೆ ಸ್ಮಶಾನದಲ್ಲಿರುವ ಗೋರಿಯಂತೆ ಕಾಣುವುದು. ಇದನ್ನು ನೋಡಿ ನೀನೇನೋ ಬಹಳ ಆಶ್ಚರ್ಯಪಡುವೆಯಲ್ಲ !

**ಪರಂತಪ**—ನಿನ್ನ ಕಣ್ಣಿಗೆ ಏನೋ ರೋಗವು ಪ್ರಾಪ್ತವಾಗಿರಬಹುದು. ಈ ಪರ್ವತಗಳೂ, ಈ ಕೋಟೆಯೂ, ಈ ಕಟ್ಟಡದಲ್ಲಿ ತೋರಿಸಲ್ಪಟ್ಟಿರುವ ಶಿಲ್ಪಚಾತುರ್ಯಗಳೂ ಸಹ, ದೇವತೆಗಳ ಮನಸ್ಸನ್ನೂ ಆಕರ್ಷಿಸುವಂತಿರುವುವಲ್ಲ! ಇದು ನಿನಗೆ ಸ್ಮಶಾನದಂತೆ ಕಾಣಬೇಕಾದರೆ, ನಿನ್ನ ವಿವೇಕಶೂನ್ಯತೆಯನ್ನು ಎಷ್ಟೆಂದು ಹೇಳೋಣ!

**ಅರ್ಥಪರ**—"ಹೆತ್ತವರಿಗೆ ಹೆಗ್ಗಣ ಮುದ್ದು"-ಎಂಬ ಗಾದೆಯು ನಿನ್ನಲ್ಲಿ ಸಾರ್ಥಕವಾಯಿತು. ಬಾ; ಒಳಗೆ ನೋಡೋಣ.

ಇಬ್ಬರೂ ಮಾತನಾಡುತ್ತ ಬಾಗಿಲ ಬಳಿಗೆ ಹೋಗಿ, ತಮ್ಮ ತಮ್ಮ ಕುದುರೆಗಳನ್ನು ಬಾಗಿಲಲ್ಲಿ ಕಟ್ಟಿಹಾಕಿ, ಬಾರುಮಾಡಿದ ಪಿಸ್ತೂಲ್‌ಗಳನ್ನೂ ದೀಪಗಳನ್ನೂ ತರಿಸಿಕೊಂಡು, ಒಳಕ್ಕೆ ಪ್ರವೇಶಿಸಿದರು. ಸ್ವಲ್ಪ ದೂರ ಹೋದಮೇಲೆ, ಅಲ್ಲಿ ಸಾವಿರಾರುಗಜ ವಿಸ್ತಾರವುಳ್ಳ ಒಂದಾನೊಂದು ಹಜಾರವು ಕಾಣಿಸಿತು. ಆ ಕಟ್ಟಡವು ಕರಿಕಲ್ಲುಗಳಿಂದ ಅತಿ ಮನೋಹರವಾಗಿ ಕಟ್ಟಲ್ಪಟ್ಟಿತ್ತು. ಅದರ ಮುಂಭಾಗದ ಉಭಯ ಪಾರ್ಶ್ವಗಳಲ್ಲಿಯೂ, ಊಳಿಗದವರು ಇರುವುದಕ್ಕೆ ಯೋಗ್ಯಗಳಾದ ಹನ್ನೆರಡು ಹನ್ನೆರಡು ಕೊಟಡಿಗಳಿದ್ದುವು. ಅದರ ಒಳಭಾಗಕ್ಕೆ ಪ್ರವೇಶಿಸಿ ನೋಡಲು, ಚಿತ್ರವಿಚಿತ್ರವಾದ ಪ್ರತಿಮೆಗಳೂ ಕಂದೀಲ್ ಗುಳೂಫ್ ಮೊದಲಾದುವುಗಳೂ ಕಟ್ಟಲ್ಪಟ್ಟಿದ್ದುವು. ಇನ್ನೂ ಮುಂದೆ ಹೋಗಿ ಹಿತ್ತಲುಬಾಗಿಲನ್ನು ದಾಟಿ ನೋಡಲು, ಅಲ್ಲಿ ಅತಿ ಮನೋಹರವಾದ ಉಪವನವೊಂದು ಗೋಚರವಾಯಿತು. ಅದರ ನಾಲ್ಕು ಕಡೆಗಳಲ್ಲಿಯೂ, ಇವರು ಮೊದಲು ನೋಡಿದ ತೊಟ್ಟಿಗೆ ಸಮಾನಗಳಾದ ನಾಲ್ಕು ತೊಟ್ಟಿಗಳಿದ್ದುವು. ಇವುಗಳು, ಏಳು ಉಪ್ಪರಿಗೆಗಳುಳ್ಳವಾಗಿ ಅತಿ ವಿಚಿತ್ರಗಳಾಗಿದ್ದುವು. ಅದನ್ನೂ ದಾಟಿಹೋಗಲು, ಮತ್ತೊಂದು ಉಪವನವು ಗೋಚರವಾಯಿತು. ಅದನ ಮಧ್ಯದಲ್ಲಿ ದೊಡ್ಡ ಕಟ್ಟಡವೊಂದು ಕಾಣಬಂದಿತು. ಆದರೆ, ಅದು ಎರಡು ಅಂತಸ್ತುಗಳು ಮಾತ್ರ ಉಳ್ಳದಾಗಿದ್ದಿತು ಅದನ್ನು ಪರೀಕ್ಷಿಸಿ ನೋಡಲು, ಅದರಲ್ಲಿರುವ ಪ್ರತಿಯೊಂದು ಕೊಠಡಿಯೂ ಕ್ಷುದ್ರಮೃಗಗಳನ್ನೂ ಅಥವಾ ಸೆರೆ ಹಾಕಲ್ಪಟ್ಟವರನ್ನೂ ಇಡುವುದಕ್ಕಾಗಿ ಮಾಡಲ್ಪಟ್ಟಿರುವಂತೆ ಕಾಣಬಂದಿತು. ಅವುಗಳನ್ನೆಲ್ಲಾ ನೋಡುತ್ತ, ಈ ಕಟ್ಟಡಗಳಿಗಾಗಿ ಎಷ್ಟುಕೋಟಿ ದ್ರವ್ಯಗಳು

ಶುರ್ಕಾಗಿರಬಹುದೆಂದು ಅತ್ಯಾಶ್ಚರ್ಯಪಡುತ್ತ, ಎಲ್ಲಾ ಕಟ್ಟಡಗಳನ್ನೂ ಒಂದೊಂದಾಗಿ ಪರೀಕ್ಷಿಸುತ್ತಿದ್ದರು. ಇದೆಲ್ಲವೂ ಪೂರಯಿಸುವುದರೊಳಗಾಗಿ, ರಾತ್ರಿ ಹನ್ನೆರಡು ಗಂಟೆಯು ಹೊತ್ತಾಯಿತು.

**ಪರಂತಪ**—ಅಯ್ಯಾ! ಅರ್ಥಪರನೆ! ಈ ಕಟ್ಟಡವನ್ನು ಹತ್ತಿ ಇಳಿದು ಬಹಳ ಆಯಾಸವಾಗಿರುವುದು. ಇಲ್ಲೆಲ್ಲಾದರೂ ಸ್ವಲ್ಪ ವಿಶ್ರಮಿಸಿಕೊಳ್ಳೋಣವೆ ?

**ಅರ್ಥಪರ**—ಚೆನ್ನಾಯಿತು! ಚೆನ್ನಾಯಿತು!! ಈ ಪ್ರದೇಶವು ಭೂತ ಪ್ರೇತ ಪಿಶಾಚಾದಿಗಳಿಗೆ ಮುಖ್ಯಾಶ್ರಯವಾದುದು ಈ ಮಧ್ಯರಾತ್ರಿಯಲ್ಲಿ-ಪಿಶಾಚಗಳು ಸಂಚರಿಸುವ ವೇಳೆಯಲ್ಲಿ-ಇಲ್ಲಿರತಕ್ಕುದು ಸರ್ವಥಾ ತರವಲ್ಲ. ಇದಕ್ಕಿಂತ, ಕಾಡಿನಲ್ಲಾದರೂ ಮಲಗಬಹುದು.

**ಪರಂತಪ** -ಇದೇನು- ವಿದ್ಯಾವಂತನಾಗಿಯೂ ಲೋಕವ್ಯವಹಾರಜ್ಞನಾಗಿಯೂ ಇರುವ ನೀನೇ ಈ ರೀತಿಯಲ್ಲಿ ಹೆದರುವೆ? ಯುಕ್ತಾಯುಕ್ತ ವಿವೇಕವಿಲ್ಲದ ಎಳೆಯಮಕ್ಕಳ ರೀತಿಯಲ್ಲಿ, ವಿವೇಕಶೂನ್ಯವಾದ ಮಾತುಗಳನ್ನು ಆಡುವೆಯಲ್ಲಾ!

**ಅರ್ಥಪರ**—ಹಾಗೋ? ಹಾಗಾದರೆ ನಾನು ಹೇಳುವುದು ನಿಜವೋ ಸುಳ್ಳೋ ಎಂಬುದು, ನಿನಗೆ ಇನ್ನು ಕ್ಷಣಕಾಲದೊಳಗಾಗಿ ವ್ಯಕ್ತವಾಗುವುದು.

ಹೀಗೆ ಮಾತನಾಡುತ್ತಿರುವಷ್ಟರಲ್ಲಿಯೇ, ಶಂಬರನ ಸಹಾಯದಿಂದ ಅರ್ಥಪರನು ಮೊದಲೇ ನಿರ್ಮಿಸಿದ್ದ ಮನುಷ್ಯಮುಖವುಳ್ಳುದಾಗಿಯೂ ಸರ್ಪಾಕಾರವಾಗಿಯೂ ಇರುವ ಬಂದಾನೊಂದು ಯಂತ್ರವು, ಅತ್ಯಾರ್ಭಟದೊಡನೆ ಪರಂತಪನ ಅಭಿಮುಖವಾಗಿ ಬಂದಿತು. ಅರ್ಥಪರನು ಭಯವನ್ನು ನಟಿಸುತ ದೂರಕ್ಕೆ ಓಡಿಹೋಗಲು, ಪರಂತಪನು ಬಾರುಮಾಡಿದ ಪಿಸ್ತೂಲನ್ನು ಹಾರಿಸಿದನು. ಕೂಡಲೇ ಶಂಬರನಿಂದ ನಿಯಮಿತರಾದ ಕೆಲ ಭಟರು ಹಿಂದುಗಡೆಯಿಂದ ಬಂದು ಅವನ ಕೈಲಿದ್ದ ಪಿಸ್ತೂಲನ್ನು ಕಿತ್ತುಕೊಂಡು, ಕೈಕಾಲುಗಳಿಗೆ ಸಂಕಲೆಯನ್ನು ಹಾಕಿ, ಶಂಬರನ ಬಳಿಗೆ ಕರೆದುಕೊಂಡು ಹೋದನು. ಆಗ ಪರಂತಪನು ಸ್ವಲ್ಪ ಹೊತ್ತು ದಿಗ್ಭ್ರಾಂತನಾಗಿದ್ದು, ಕೂಡಲೇ ಚೇತರಿಸಿಕೊಂಡು, ಶಂಬರನನ್ನೂ ಅವನ ದೂತ

ರನ್ನೂ ನೋಡಿ "ಓಹೋ ! ಮೋಸಹೋದೆನು ! ನನ್ನನ್ನು ಕೊಲ್ಲುವು ದಕ್ಕಾಗಿ ಶಂಬರನ ಪ್ರೇರಣೆಯಿಂದ ಅರ್ಥಪರನು ಈ ತಂತ್ರಗಳನ್ನು ನಡೆಸಿ ರಬಹುದು. ಇವರ ಕೈಗೆ ನಾನು ಸಿಕ್ಕಿಬಿದ್ದಿರುವನು. ಇನ್ನೇನು ಮಾಡು ತ್ತಾರೋ ತಿಳಿಯದು." ಎಂದು ನಾನಾವಿಧವಾಗಿ ಚಿಂತಿಸುತ್ತ ಸ್ತಬ್ಧನಾದನು.

**ಶಂಬರ**—ಎಲೆ ದುರಾತ್ಮನೆ! ನನ್ನ ಪ್ರೇಮಪಾತ್ರಳನ್ನು ಉಪಾಯಾಂ ತರದಿಂದ ಸ್ವಾಧೀನಪಡಿಸಿಕೊಂಡೆಯಲ್ಲ ! ಈಗ ಏನುಹೇಳುತ್ತೀಯೆ ?

**ಪರಂತಪ**—ಹೇಳುವುದೇನು ? ನೀನು ದುರಾತ್ಮನು. ನನ್ನನ್ನು ಸಿಕ್ಕಿ ಸಿಕೊಂಡೆನೆಂದು ಗರ್ವಪಡಬೇಡ. ಈ ನಿನ್ನ ಸಂತೋಷವು ಸ್ಥಿರವಾಗಿರ ಲಾರದು. ನಿನಗೆ ಈಗ ತೋರುವ ಪ್ರತೀಕಾರಗಳನ್ನೆಲ್ಲ ಮಾಡು. ಅದಕ್ಕೆ ತಕ್ಕ ಫಲವನ್ನು ನೀನು ಕೂಡಲೇ ಅನುಭವಿಸುವೆ. ನಿನ್ನ ಹೆದರಿಕೆಗಳಿಗೆಲ್ಲ ನಾನು ಹೆದರತಕ್ಕವನಲ್ಲ. ನನ್ನನ್ನು ಜೀವಸಹಿತವಾಗಿ ಬಿಟ್ಟಲ್ಲಿ, ನಾನೇ ನಿನಗೆ ತಕ್ಕ ಪ್ರತೀಕಾರವನ್ನು ಮಾಡುವೆನು; ಅಥವಾ ನನ್ನ ಪ್ರಾಣವನ್ನು ನೀನು ತೆಗೆದರೂ, ಬೇರೆ ಜನರಿಂದ ನಿನಗೆ ಅಪಾಯ ಸಂಭವಿಸದೆ ಇರಲಾರದು.

**ಶಂಬರ**—ನೀನು ನನ್ನ ಪ್ರಾಣಪ್ರಿಯಳನ್ನು ಅಪಹರಿಸಿದ್ದಕ್ಕೆ ತಕ್ಕ ಪ್ರತೀಕಾರವನ್ನು ಈಗ ನಾನು ನಿನಗೆ ಮಾಡದೆ ಬಿಡತಕ್ಕವನಲ್ಲ. ನಿಮ್ಮ ವಿವಾಹದ ಕರಾರನ್ನು ನಾಶಪಡಿಸುತ್ತೇನೆ; ಆ ಕಾಮಮೋಹಿನಿಯನ್ನು ಕೂಡಲೇ ನನ್ನ ಸ್ವಾಧೀನಪಡಿಸಿಕೊಳ್ಳುತ್ತೇನೆ. ಮಾಧವನ ಉಯಿಲು ಈಗ ನನ್ನ ವಶದಲ್ಲಿದೆ. ರತ್ನಾಕರವು ತನ್ನದೆಂಬ ದುರಭಿಮಾನದಿಂದ, ನೀನು ಅತಿಗರ್ವಪಡುತ್ತಿದ್ದೆ. ಈಗ ಆ ರತ್ನಾಕರವೂ ಕಾಮಮೋಹಿ ನಿಯೂ ನನ್ನ ಸ್ವಾಧೀನವಾದಂತೆ ತಿಳಿ. ಇನ್ನು ಹೆಚ್ಚಾಗಿ ಹೇಳಿ ಪ್ರಯೋ ಜನವೇನು ? ನೀನೇ ನನ್ನ ಕೈವಶವಾಗಿರುವೆ. ನಿನ್ನ ಹೆಂಡತಿಗೆ ಗಂಡನಾ ಗಿಯೂ, ನನಗೆ ಸೇರತಕ್ಕ ಮಾಧವನ ಆಸ್ತಿಗೆ ಯಜಮಾನನಾಗಿಯೂ ಇದ್ದುಗೊಂಡು, ಪ್ರತಿಕ್ಷಣದಲ್ಲಿಯೂ ನಿನ್ನನ್ನು ಹಿಂಸಿಸುತ್ತ, ಅದರಿಂದ ನಾನು ಸರ್ವದಾ ಸಂತುಷ್ಟನಾಗಿರಬೇಕೆಂಬ ಅಭಿಲಾಷೆ ನನಗಿರುವುದು.

**ಪರಂತಪ**—ಎಲಾ ನರಾಧಮನೇ ! ನಿನ್ನ ಪೊಳ್ಳುಹರಟೆಗಳನ್ನು ನಿಲ್ಲಿಸು. ಭಗವತ್ಕೃಪೆಯಿಂದ ನನಗೆ ಬಂಧ ವಿಮೋಚನೆಯಾದರೆ, ನಿನ್ನ

ನಾಲಗೆಯನ್ನು ಸೀಳಿ ಭೂತಗಳಿಗೆ ಔತಣನಮಾಡುವೆನು. ನನಗೆ ಬಂಧವಿಮೋಚನೆಯಾಗದ ಪಕ್ಷದಲ್ಲಿ, ನಿನ್ನ ದುಷ್ಕೃತ್ಯಗಳೇ ನಿನ್ನನ್ನು ಸುಡುವುವು.

**ಶಂಬರ**—ಎಲೊ ಕರಾಳ! ಈ ನೀಚನನ್ನು ಸೆರೆಯಲ್ಲಿಟ್ಟು, ನಿತ್ಯವೂ ಇವನಿಗೆ ಎರಡು ಡಜನ್ ಛಡಿಯೇಟುಗಳನ್ನು ಹಾಕು. ಇವನಿಗೆ ಒಂದೇ ಹೊತ್ತು ಆಹಾರವನ್ನು ಹಾಕು. ಇವನಿಗೆ ಹೊಡೆಯುವಾಗಮಾತ್ರ, ಜಾಗರೂಕನಾಗಿ ಪ್ರಾಣಹೋಗದಂತೆ ನೋಡಿಕೊ; ಇವನ ಆತ್ಮಹತ್ಯಕ್ಕೆ ಅವಕಾಶಕೊಡದಂತೆ ಜಾಗರೂಕನಾಗಿರು.

ಕರಾಳನು 'ಅಸ್ಪೃಶ್ಯ' ಎಂದು ಕರೆದುಕೊಂಡು ಹೋಗುವಷ್ಟರಲ್ಲಿ, ಅರ್ಥಪರನು ಬಂದನು.

**ಶಂಬರ**—ಎಲೈ ಅರ್ಥಪರನೆ! ಕಾರಾಗೃಹವನ್ನು ಸಿದ್ಧಪಡಿಸಿರುವೆಯಾ?

**ಅರ್ಥಪರ**—ದೃಢವಾದ ಸಲಾಕಿಗಳಿಂದ ಅಭೇದ್ಯವಾಗಿರುವಂತೆ ಮಾಡಿಸಿರುವೆನು.

**ಶಂಬರ**—ಈತನ ಉಡುಪುಗಳನ್ನು ತೆಗೆಸಿ, ಕಾರಾಗೃಹಕ್ಕೆ ಯೋಗ್ಯವಾದ ಉಡುಪುಗಳನ್ನು ತೊಡಿಸು.

ಅರ್ಥಪರನು ಅದರಂತೆಯೇ ಅವನಿಗೆ ಮೊದಲಿನ ಉಡುಪುಗಳನ್ನು ತೆಗೆಸಿ, ಬೇರೆ ಉಡುಗೆಗಳನ್ನು ತೊಡಿಸಿದನು.

**ಶಂಬರ**—ಇವನ ಜೇಬಿನಲ್ಲಿ ವಿವಾಹದ ಕರಾರು ಇರುವುದೇನೋ ನೋಡು.

**ಅರ್ಥಪರ**—(ನೋಡಿ) ಇಲ್ಲ.

**ಶಂಬರ**—ಎಲಾ ನೀಚನೇ! ಆ ಕಾಗದವೇನಾಯಿತು?

**ಪರಂತಪ**—ನಾನು ಹೇಳತಕ್ಕವನಲ್ಲ.

**ಶಂಬರ**—ಒಳ್ಳೆಯದು. ನಿನ್ನಿಂದಲೇ ನಾನು ಹೇಳಿಸುತ್ತೇನೆ. (ಬಾರು ಮಾಡಿದ ಪಿಸ್ತೂಲನ್ನು ಅವನಿಗೆ ಇದಿರಾಗಿ ಹಿಡಿದನು.)

**ಪರಂತಪ**—ಛೀ! ಹೇಡಿಯೇ! ಬಿಡು. ಈ ಗೊಡ್ಡುಬೆದರಿಕೆಗೆ ನಾನು ಹೆದರತಕ್ಕವನಲ್ಲ. ಈ ಕಾರಾಗೃಹವಾಸಕ್ಕಿಂತ ಮರಣವೇ ಉತ್ತಮವೆಂದು ಭಾವಿಸಿರುವೆನು. ನೀನು ಹೊಡೆದರೂ ಸರಿ, ನಾನು ಹೇಳತಕ್ಕವನಲ್ಲ.

**ಶಂಬರ**–ಹಾಗೋ? ಹಾಗಾದರೆ ನಿನ್ನನ್ನು ಕೊಲ್ಲುವುದಕ್ಕಿಂತ, ಜೀವಚ್ಛವನನ್ನಾಗಿ ಮಾಡಿ ಹಿಂಸಿಸುವುದೇ ನನಗೆ ಆಪ್ಯಾಯನಕರವಾದುದು. ಎಲೈ ಅರ್ಥಪರನೆ! ನೀನು ಈ ಕರಾಳನ ಸಹಾಯದಿಂದ ಇವನನ್ನು ಕಾರಾಗೃಹಕ್ಕೆ ಸೇರಿಸು. (ಎಂದು ಹೇಳಿ, ತಾನು ವಿಶ್ರಮಾರ್ಥವಾಗಿ ಹೊರಟುಹೋದನು. ಅವರಿಬ್ಬರೂ ಇವನನ್ನು ಕಾರಾಗೃಹಕ್ಕೆ ಸೇರಿಸಿ ಬೀಗಹಾಕಿಕೊಂಡುಬರುವಷ್ಟರಲ್ಲಿ ಪುನಃ ಅಲ್ಲಿಗೆ ಬಂದು) ಎಲಾ! ದುರಾತ್ಮನಾದ ಪರಂತಪನೆ! ಈ ಛಡಿಯೇಟುಗಳೂ ಕಾರಾಗೃಹವಾಸವೂ ನಿನಗೆ ಯೋಗ್ಯವಾದುವಲ್ಲ. ಈಗಲೂ ನನ್ನ ಪ್ರಿಯಳನ್ನು ನನ್ನ ವಶಕ್ಕೆ ಒಪ್ಪಿಸಿ ನೀನು ಈ ದೇಶವನ್ನೇ ಬಿಟ್ಟು ಹೊರಟುಹೋಗುವುದಾಗಿ ಒಪ್ಪಿದರೆ, ನೀನು ನಿರಾತಂಕವಾಗಿ ಜೀವಿಸಿಕೊಂಡಿರಬಹುದು; ಇಲ್ಲದಿದ್ದರೆ ನಿನಗೆ ಬಂಧವಿಮೋಚನೆಯಾಗಲಾರದು. ಏನು ಹೇಳುತ್ತೀಯೆ?

**ಪರಂತಪ**–ನನಗೆ ಬಂಧವಿಮೋಚನೆಯಾದರೆ, ನಿನ್ನನ್ನು ಜೀವಸಹಿತವಾಗಿ ಬಿಡುವೆನೆ? ನಿನ್ನ ತಲೆಯನ್ನು ಸಹಸ್ರಭಾಗವಾಗಿ ಛೇದಿಸುವೆನು.

**ಶಂಬರ**–ಹಾಗಿದ್ದರೆ, ನಿನಗೆ ಈ ಬಂಧನವು ತಪ್ಪತಕ್ಕದ್ದಲ್ಲ. ಎಲೈ ಅರ್ಥಪರನೇ! ಈತನ ಕೈಕಾಲುಗಳ ಸಂಕಲೆಯನ್ನು ಬಿಡಿಸು ಕರಾಳನೇ! ಇವನು ಈ ಕಬ್ಬಿಣದ ಸಲಾಕಿಗಳಿಗೆ ಕೈಹಾಕಿದರೆ ಇವನ ಕೈಬೆರಳುಗಳನ್ನು ಕತ್ತರಿಸಿಬಿಡುವಂತೆ ಯಾಮಿಕರಿಗೆಲ್ಲಾ ಹೇಳು. ಎಲಾ ಪರಂತಪ! ಜೋಕೆ! ವಿಧೇಯನಾಗಿರು!! ಅವಿಧೇಯತೆಯನ್ನು ತೋರಿಸಿದರೆ ಕೇಡಿಗೆ ಗುರಿಯಾಗುವೆ!!!

**ಪರಂತಪ**–ಎಲೆ ನೀಚನೇ! ಸಾಯುವುದಕ್ಕೆ ಅಂಜುವ ಹೇಡಿಗಳಿಗೆ ಈ ಭಯೋತ್ಪಾತವನ್ನುಂಟುಮಾಡು; ಹೋಗು. ಇಷ್ಟು ಮಾತ್ರಕ್ಕೆ ಏಕೆ ಹಿಗ್ಗುವೆ? ಕ್ಷಿಪ್ರದಲ್ಲಿಯೇ ತಕ್ಕ ಫಲವನ್ನು ಅನುಭವಿಸುವೆ.

ಇದನ್ನು ಕೇಳಿ, ಅರ್ಥಪರ ಶಂಬರರಿಬ್ಬರೂ ನಗುತ್ತ ಹೊರಟುಹೋದರು. ಪರಂತಪನು ಕಾರಾಗೃಹದಲ್ಲಿ ತನ್ನ ದುರದೃಷ್ಟಕ್ಕೂ ಅರ್ಥಪರನ ಮೋಸಕ್ಕೂ ಚಿಂತಿಸುತ್ತಿದ್ದನು.

ಮಾರನೆಯ ದಿವಸ, ಪರಂತಪನು ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿಲ್ಲದಂತೆ ರತ್ನಾಕರದಲ್ಲಿ ಕಾವಲುಇಟ್ಟು, ಅರ್ಥಪರನಿಗೆ ಮೇಲುವಿಚಾರ

ಕೆಯನ್ನು ವಹಿಸಿ, ಅವನಿಗೆ ಅಲ್ಲಿಯೇ ಸ್ವಲ್ಪ ದ್ರವ್ಯವನ್ನು ಕೊಟ್ಟು, ಮುಂದೆ ವಿಶೇಷವಾಗಿ ಕೊಡುವಂತೆ ವಾಗ್ದಾನಮಾಡಿ, ಶಂಬರನು ಸುಮಿತ್ರನ ಉತ್ತರಕ್ರಿಯೆಗಳನ್ನು ನಡೆಸುವುದಕ್ಕೋಸ್ಕರ ಅಲ್ಲಿಂದ ಹಿಂದಿರುಗಿದನು. ಆ ದಿನ ಮಧ್ಯಾಹ್ನಕ್ಕೆ ಉತ್ತರಕ್ರಿಯೆಗಳು ಪೂರಯಿಸಿದುವು ಆ ಕಾಲದಲ್ಲಿ ಬಹುಜನಗಳು ಉತ್ತರಕ್ರಿಯೆಗಳಿಗೆ ಹೋಗಿದ್ದರು. ಶಂಬರನುಮಾತ್ರ, ದೇಹ ಸ್ವಸ್ಥವಿಲ್ಲದಂತೆ ವೇಷವನ್ನು ಹಾಕಿಕೊಂಡು, ಸುಮಿತ್ರನ ಭಂಡಾರ ದಲ್ಲಿ ಉಯಿಲು ಮೊದಲಾದ ಕಾಗದಪತ್ರಗಳನ್ನು ಹುಡುಕುವುದರಲ್ಲಿ ಉದ್ಯುಕ್ತನಾಗಿದ್ದನು. ಕಲಾವತಿಯನ್ನು ಮದುವೆಮಾಡಿಕೊಳ್ಳುವುದಕ್ಕೆ ಇವನಿಗೆ ಇಷ್ಟವಿರಲಿಲ್ಲ. ಆದರೆ, ಸುಮಿತ್ರನು ಕಲಾವತಿಯನ್ನು ಮದುವೆಮಾಡಿ ಕೊಂಡವನಿಗೆ ತನ್ನ ಆಸ್ತಿಯನ್ನು ಕೊಡುವಂತೆ ಉಯಿಲು ಬರೆದಿದ್ದನು. ಆ ವುಯಿಲನ್ನು ಅಪಹರಿಸಿ ಸಮಸ್ತ ಆಸ್ತಿಯನ್ನೂ ಸುಮಿತ್ರನು ತನಗೇ ಕೊಟ್ಟಿರುವಂತೆ ಅರ್ಥಪರನಿಂದ ಒಂದು ಹೊಸ ಉಯಿಲನ್ನು ನಿರ್ಮಾಣ ಮಾಡಿಸಿದರೆ ತನಗೆ ಸುಮಿತ್ರನ ಆಸ್ತಿಯೆಲ್ಲಾ ದಕ್ಕುವುದೆಂದು ಯೋಚಿಸಿದನು. ಪರಂತಪನನ್ನು ಕೊಂದು, ಕಾಮಮೋಹಿನಿಯನ್ನು ಮದುವೆಮಾಡಿಕೊಂಡು, ಸುಮಿತ್ರನ ಆಸ್ತಿಯನ್ನು ಅಪಹರಿಸಿ, ಕಲಾವತಿಗೆ ಏನೂ ಇಲ್ಲದಂತೆ ಮಾಡಿದರೆ, ತನ್ನ ಇಷ್ಟಾರ್ಥ ಪರಿಪೂರ್ತಿಯಾಗುವುದೆಂದು ಶಂಬರನು ಭಾವಿಸಿದನು. ದುರಾತ್ಮರ ಸಂಕಲ್ಪವು ಒಂದು ವಿಧವಾಗಿದ್ದರೆ ದೈವಸಂಕಲ್ಪವು ಮತ್ತೊಂದು ವಿಧವಾಗಿರುವುದೇನಾಶ್ಚರ್ಯ? ಉತ್ತರಕ್ರಿಯೆಗಳಿಗೋಸ್ಕರ ಬಂದಿದ್ದ ಜನಗಳು ಇನ್ನೂ ಸುಮಿತ್ರನ ಮನೆಯಲ್ಲಿರುವಾಗಲೇ, ಶಂಬರನು ಸುಮಿತ್ರನ ಭಂಡಾರವನ್ನು ಪ್ರವೇಶಿಸಿ ಉಯಿಲನ್ನು ಹ ಡುಕುತ್ತಿದ್ದನಷ್ಟೆ! ಹಾಗೆ ಅವನು ಹುಡುಕುತ್ತಿದ್ದಾಗ, ದೈವಾಧೀನದಿಂದ ಕಲಾವತಿಯೂ ಅಲ್ಲಿಗೆ ಹೋದಳು ಶಂಬರನು ಅನೇಕ ಕಾಗದಪತ್ರಗಳನ್ನು ತೆಗೆದು "ಇದೇ ಸುಮಿತ್ರನ ಆಖೈರ್ ಉಯಿಲು; ದೈವಾಧೀನದಿಂದ ನನ್ನ ಕೈಗೆ ಸಿಕ್ಕಿತು; ಇನ್ನು ನಾನುಕೃತಕೃತ್ಯನಾದೆನು." ಎಂಬುದಾಗಿ, ಆನಂದ ಪರವಶತೆಯಿಂದ ಗಟ್ಟಿಯಾಗಿ ಅಂದನು.

**ಕಲಾವತಿ**—ಏನೆಂದೆ?

**ಶಂಬರ**—ಯಾರು, ಕಲಾವತಿಯೋ?

**ಕಲಾವತಿ**—ಹೌದು, ನಾನು, ಕಲಾವತಿ !!!

ಇವರಿಬ್ಬರೂ ಭಂಡಾರದ ಮಧ್ಯಭಾಗದಲ್ಲಿದ್ದರು. ಕಲಾವತಿಯು, ಸುಮಿತ್ರನ ಮರಣದದೆಸೆಯಿಂದ ಉಂಟಾದ ದುಃಖದಿಂದಲೂ, ಶಂಬರನು ಏಕಾಂತವಾಗಿ ಭಂಡಾರವನ್ನು ಪ್ರವೇಶಿಸಿ ಕಾಗದಪತ್ರಗಳನ್ನು ತೆಗೆದು ಕೊಂಡದ್ದರಿಂದುಂಟಾದ ಆಗ್ರಹದಿಂದಲೂ, ಬಹಳ ಭಯಂಕರಳಾಗಿದ್ದಳು. ಆಕೆಯ ಕಣ್ಣಿನಲ್ಲಿ ಪಿತೃವಿಯೋಗದಿಂದ ಉಂಟಾದ ನೀರೂ, ಶಂಬರನ ದೌರಾತ್ಮ್ಯದಿಂದ ಉಂಟಾದ ಕೋಪವೂ, ಒಂದಕ್ಕಿಂತ ಒಂದು ಅತಿಶಯವಾ ಗಿದ್ದುವು. ಕೈಯಲ್ಲಿ ಪಿಸ್ತೂಲನ್ನು ಹಿಡಿದುಕೊಂಡು ಇದ್ದಳು. ಶಂಬರನನ್ನು ಯಮಪುರಿಗೆ ಕಳುಹಿಸಬೇಕೆಂದು ಸಂಕಲ್ಪಮಾಡಿಕೊಂಡು ಬಂದಿರತಕ, ಮೃತ್ಯುದೇವತೆಯೋಪಾದಿಯಲ್ಲಿ ಕಾಣಬಂದ ಕಲಾವತಿಯನ್ನು ನೋಡಿ, ಶಂಬರನು ಭಯಪರವಶನಾದನು.

**ಶಂಬರ**—ಕಲಾವತಿ! ಇದೇಕೆ ಇಷ್ಟು ಕೋಪವುಳ್ಳವಳಾಗಿರುತ್ತೀಯೆ? ಪಿಸ್ತೂಲನ್ನು ಬೀಸಾಕು. ಸ್ತ್ರೀಯರ ಕೈಗೆ ಪಿಸ್ತೂಲು ಭೂಷಣವಾದುದ ಲ್ಲವೆಂಬುದು, ನಿನಗೆ ತಿಳಿಯದೆ? ಅದೆಲ್ಲಾದರೂ ಅಕಸ್ಮಾತ್ತಾಗಿ ಹತ್ತಿ ಕೊಂಡು ಯಾರಿಗಾದರೂ ತಗುಲೀತು.

**ಕಲಾವತಿ**—ಸ್ತ್ರೀಯರ ಕೈಗೆ ಪಿಸ್ತೂಲು ಹೇಗೆ ಅನರ್ಹವಾದುದೋ, ಪುರುಷರ ಕೈಗೆ ಪರಸ್ವಾಪಹರಣವೂ ಹಾಗೆಯೇ ಅನರ್ಹವಾದುದು. ಈ ಕಾಗದಪತ್ರಗಳನ್ನು ಕಳುವುಮಾಡಿ, ನಿನ್ನ ಕೈಗಳು ಬಹಳ ದುಷ್ಟವಾಗಿ ಪರಿಣ ಮಿಸಿವೆ. ಕಾಗದಪತ್ರಗಳನ್ನು ಮೊದಲಿದ್ದ ಸ್ಥಾನದಲ್ಲಿ ಇಟ್ಟು-ಇಲ್ಲಿಗೆ ಹೇಗೆ ಕಳ್ಳತನದಿಂದ ಬಂದೆಯೋ ಹಾಗೆಯೇ ಹೊರಟುಹೋದರೆ, ನಿನಗೆ ಇನ್ನೂ ಸ್ವಲ್ಪದಿವಸ ಆಯುಸ್ಸಿರುವುದು. ಹಾಗಿಲ್ಲದ ಪಕ್ಷದಲ್ಲಿ, ನಿನ್ನ ದೌರಾತ್ಮ್ಯಕ್ಕೆ ತಕ್ಕ ಪ್ರತಿಫಲವನ್ನು ಅನುಭವಿಸುವೆ. ಯಮಪುರಿಗೆ ಮಾರ್ಗವನ್ನು ಹುಡು ಕಬೇಡ. ನನ್ನ ತಂದೆಯನ್ನು ಕೊಂದುದಲ್ಲದೆ, ನನ್ನ ಮನೆಗೆ ಕಳುವುಮಾಡು ವುದಕ್ಕೋಸ್ಕರವೂ ಬಂದಿದ್ದೀಯೆ. ಕಾಗದಪತ್ರಗಳನ್ನು ಕೆಳಗೆ ಹಾಕಿ ಹೋಗುವೆಯೋ ?-ಯಮಪುರಿಗೆ ಕಳುಹಿಸಲೋ ?

**ಶಂಬರ**—ಹುಚ್ಚಳ ಹಾಗೆ ಮಾತನಾಡಬೇಡ. ನನ್ನ ಮಾತನ್ನು ಕೇಳು. ಪಿಸ್ತೂಲನ್ನು ಬೀಸಾಕು. ಹಾಗಿಲ್ಲದ ಪಕ್ಷದಲ್ಲಿ ನೀನು ಬಹಳಕಷ್ಟಕ್ಕೆ ಗುರಿಯಾಗುವೆ.

ಕಲಾವತಿ—ನೀನು ಪರಮನೀಚನು. ನಾನು ನಿನ್ನ ಮಾತನ್ನು ಕೇಳ ತಕ್ಕವಳಲ್ಲ. ಈ ಕಾಗದಪತ್ರಗಳನ್ನು ಕೊಟ್ಟು ಇಲ್ಲಿಂದ ತೆರಳಿದರೆ ಸರಿ; ಇಲ್ಲದಪಕ್ಷದಲ್ಲಿ, ನನ್ನ ಕೆಲಸವನ್ನು ನಾನು ಮಾಡುವೆನು.

ಶಂಬರ—ಎಲೈ ನೀಚಳೇ! ಕಾಗದಗಳು ನಿನ್ನವಲ್ಲ; ಅವು ನನ್ನವು.

ಕಲಾವತಿ—ಸಾಮಾನ್ಯರಾದ ಕಳ್ಳರು ತಾವು ಅಪಹರಿಸಿದ ಪದಾರ್ಥ ಗಳನ್ನು ತಮ್ಮವೆಂದು ಹೇಳಿಕೊಳ್ಳುವುದು ಅಪೂರ್ವ. ನೀನು ಸಾಮಾನ್ಯ ನಾದ ಕಳ್ಳನಲ್ಲ; ನಿನ್ನನ್ನು ಚೋರಶಿಖಾಮಣಿಯೆಂದೇ ಹೇಳಬಹುದು. ವ್ಯರ್ಥವಾದ ಮಾತುಗಳನ್ನು ಏತಕ್ಕೆ ಆಡುವೆ? ಆ ಕಾಗದಗಳನ್ನು ಕೆಳಗೆ ಹಾಕಿದರೆ ಸರಿ; ಸಾವಕಾಶಮಾಡಿದರೆ, ಪಿಸ್ತೂಲನ್ನು ಹಾರಿಸಿ ನಿನ್ನನ್ನು ಈ ಕ್ಷಣದಲ್ಲಿಯೇ ಯಮಪುರಿಗೆ ಕಳುಹಿಸುವೆನು.

ಇವಳ ಸ್ಥೈರ್ಯವನ್ನು ನೋಡಿ, ಸಾವಕಾಶಮಾಡಿದರೆ ಕೊಲ್ಲುವ ಳೆಂದು ತಿಳಿದುಕೊಂಡು, ಶಂಬರನು ಕಾಗದಪತ್ರಗಳನ್ನು ಅವಳ ಕಾಲಿನ ಬಳಿಯಲ್ಲಿಟ್ಟು, ವಿನೀತನಾಗಿ ಹೊರಟುಹೋಗುವಂತೆ ಅಭಿನಯಿಸಿದನು. ಕಲಾವತಿಯು ಪಿಸ್ತೂಲನ್ನು ಒಂದು ಕೈಯಲ್ಲಿಟ್ಟುಕೊಂಡು, ಮತ್ತೊಂದು ಕೈಯಲ್ಲಿ ಆ ಕಾಗದಗಳನ್ನು ತೆಗೆದುಕೊಂಡು, ಅವುಗಳು ಯಾವವಿಷಯ ವಾದ ಕಾಗದಗಳೋ ಎಂದು ನೋಡುತಿದ್ದಳು.

ಶಂಬರ—ಕಲಾವತಿ! ಇನ್ನಾದರೂ ಕೋಪವನ್ನು ಬಿಡು. ನಿನ್ನ ತಂದೆಯು ಉಯಿಲಿನಲ್ಲಿ ನನಗೆ ಯಾವ ಆಸ್ತಿಯನ್ನು ಕೊಟ್ಟಿರುತ್ತಾನೆ?

ಕಲಾವತಿ—ನಿನಗೆ ಆಸ್ತಿಯೆಲ್ಲಿಯದು? ನೀನು ಉಲ್ಲಂಘಿಸಿರತಕ್ಕ ಷರತ್ತನ್ನು ನೆರವೇರಿಸಿದ ಪಕ್ಷದಲ್ಲಿ, ಎಲ್ಲಾ ಆಸ್ತಿಯನ್ನೂ ನಿನಗೇ ಬಿಟ್ಟಿ ರುತ್ತಾನೆ.

ಶಂಬರ—ಅದು ಯಾವ ಷರತ್ತು?

ಕಲಾವತಿ—ದುರಾತ್ಮರಿಗೆ, ಆಡಿದ ಮಾತೂ ಮಾಡಿದ ಪ್ರತಿಜ್ಞೆಗಳೂ ಎಂದಿಗೂ ಜ್ಞಾಪಕವಿರುವುದಿಲ್ಲ.

ಶಂಬರ—ನಿನ್ನನ್ನು ಮದುವೆಮಾಡಿಕೊಂಡರೆ ತನ್ನ ಆಸ್ತಿಗೆ ನಾನು ಅರ್ಹನೆಂದು ಬರೆದಿರುತ್ತಾನೋ?

**ಕಲಾವತಿ**—ನನ್ನನ್ನು ನೀನು ಮದುವೆ ಮಾಡಿಕೊಂಡರೆ, ನನ್ನ ತಂದೆಯ ಆಸ್ತಿಯಲ್ಲಿ ಅರ್ಧ ಆಸ್ತಿಯು ನಿನಗೆ ಬರುವುದು. ತಿರಸ್ಕರಿಸಿದರೆ ನಿನಗೆ ಒಂದು ಕಾಸೂ ಬರುವುದಿಲ್ಲ.

**ಶಂಬರ**—ನಿನ್ನ ತಂದೆಯು ಈ ರೀತಿಯಲ್ಲಿ ಎಂದಿಗೂ ಏರ್ಪಾಡು ಮಾಡಿರಲಾರನು. ಅವನು ಬರೆದಿರತಕ್ಕ ಉಯಿಲನ್ನು ನಾನು ಪ್ರತ್ಯಕ್ಷವಾಗಿ ನೋಡಿದಹೊರತು, ನಿನ್ನ ಮಾತನ್ನು ನಾನು ನಂಬಲಾರೆನು. ಅದು ಹಾಗಿರಲಿ ; ನಾನು ನಿನ್ನನ್ನು ಮದುವೆ ಮಾಡಿಕೊಳ್ಳುವೆನೆಂಬ ಆಶೆಯನ್ನು ಬಿಡು. ಪ್ರಪಂಚದಲ್ಲಿ ನನಗೆ ಅನುರೂಪಳಾದ ಸ್ತ್ರೀರತ್ನವು ಒಬ್ಬಳೇ ಒಬ್ಬಳು. ಅವಳೇ ಕಾಮಮೋಹಿನಿಯು.

**ಕಲಾವತಿ**—ಕಾಮಮೋಹಿನಿಯನ್ನು ಮದುವೆ ಮಾಡಿಕೊಳ್ಳತಕ್ಕ ಆಶೆಯನ್ನು ನೀನು ಬಿಡು. ಅವಳು ತನಗೆ ಅನುರೂಪನಾದ ಪತಿಯನ್ನು ವರಿಸಿರುವಳು. ಅವರಿಗೆ ವಿವಾಹವು ಪೂರಯಿಸಿರುವುದು.

**ಶಂಬರ**—ವ್ಯರ್ಥವಾದ ಮಾತುಗಳನ್ನು ಏತಕ್ಕೆ ಆಡುವೆ? ಕಾಮಮೋಹಿನಿಯು ನನ್ನ ಕರಗತಳಾಗಿರುತ್ತಾಳೆ. ಆ ಚಂಡಾಲನಾದ ಪರಂತಪನ ಅವತಾರವು ಒಂದು ನಿಮಿಷದಲ್ಲಿ ಪೂರಯಿಸುವುದು. ಕಾಮಮೋಹಿನಿಯು ನನ್ನ ದಾಸಿಯಾಗಿಯೂ ನಾಯಕಿಯಾಗಿಯೂ ಇರುವಳು.

**ಕಲಾವತಿ**—ಹಾಗೋ ? ನಿನ್ನ ಬಡಾಯಿಯನ್ನು ನೋಡಿದರೆ, ನೀನು ಪರಂತಪನನ್ನು ಖೂನಿಮಾಡಿರಬಹುದೆಂದು ತೋರುತ್ತದೆ.

**ಶಂಬರ**—ಪರಂತಪನು ಶೀಘ್ರದಲ್ಲಿ ದೇಹತ್ಯಾಗವನ್ನೇ ಮಾಡಬಹುದು. ಅಥವಾ, ಜೀವಂತನಾಗಿದ್ದಾಗ್ಯೂ, ನನಗೂ ಕಾಮಮೋಹಿನಿಗೂ ಶೀಘ್ರದಲ್ಲಿ ಉಂಟಾಗತಕ್ಕ ಸಂಬಂಧವನ್ನು ತಪ್ಪಿಸುವುದಕ್ಕೆ ಅವನಿಗೆ ಸ್ವಲ್ಪವೂ ಶಕ್ತಿಯಿರುವುದಿಲ್ಲ.

ಈ ಮಾತನ್ನು ಕೇಳಿದಕೂಡಲೆ, ಕಲಾವತಿಗೆ ಬಹಳ ಕೋಪವುಂಟಾಯಿತು. ಈ ದುರಾತ್ಮನನ್ನು ಕೊಲ್ಲೋಣವೇ ಬೇಡವೇ ಎಂದು ಯೋಚಿಸುತಿದ್ದಳು.

**ಕಲಾವತಿ**—ಎಲಾ ದುರಾತ್ಮನಾದ ಶಂಬರನೇ ! ನನ್ನನ್ನು ಮದುವೆ ಮಾಡಿಕೊಳ್ಳುವುದಾಗಿ ಪ್ರತಿಜ್ಞೆಮಾಡಿ ವಂಚಿಸಿದ್ದೀಯೆ. ನೀನು ಮಹಾ

ಪಾಪಿ ನಿನ್ನಲ್ಲಿ ಸ್ವಲ್ಪವೂ ಅನುರಾಗವಿಲ್ಲದಿರತಕ್ಕ ಪರಸ್ತ್ರೀಯಾದ ಕಾಮಮೋಹಿನಿಯ ಗಂಡನನ್ನು ಸಂಹರಿಸಿ ಅವಳನ್ನು ಕೆಡಿಸಬೇಕೆಂಬ ಉದ್ಯೋಗದಲ್ಲಿ ಇರುತ್ತೀಯೆ. ಇದು ಘೋರವಾದ ಪಾಪಕೃತ್ಯವು. ಕಾಮಮೋಹಿನಿಯು ಪ್ರಾಣವನ್ನಾದರೂ ಬಿಡುವಳೇಹೊರತು, ನಿನ್ನಂಥ ದುರಾತ್ಮನನ್ನು ದೃಷ್ಟಿಸಿಕೂಡ ನೋಡಳು. ನಿನ್ನಂಥ ಚಂಡಾಲನಿಗೆ, ಪರಿಶುದ್ಧಳಾಗಿಯೂ ಪತಿವ್ರತಾಶಿರೋಮಣಿಯಾಗಿಯೂ ಇರುವ ಕಾಮಮೋಹಿನಿಯು ಹೆಂಡತಿಯಾಗುವಳೇ ? ಅತ್ಯುತ್ಕಟವಾದ ಪಾಪಗಳಿಗೆ ಪ್ರತೀಕಾರವು ಈ ಜನ್ಮದಲ್ಲಿ ಬಹಳ ಶೀಘ್ರದಲ್ಲಿಯೇ ಸಂಭವಿಸಬಹುದೆಂದು ಮಹಾಪುರುಷರು ಹೇಳುತ್ತಾರೆ. ನಿನ್ನ ಪಾಪಕರ್ಮಗಳ ಫಲವನ್ನು ನೀನು ಅನುಭವಿಸದಿರುವುದಕ್ಕಾಗುವುದಿಲ್ಲ. ನಿನ್ನಂಥ ದುರಾತ್ಮನನ್ನು ಕೊಲ್ಲುವುದು ಪುಣ್ಯಕರವಾದುದು. ಕಾಮಮೋಹಿನಿಯನ್ನು ಕೆಡಿಸುವುದಕ್ಕೆ ನಿನಗೆ ಅವಕಾಶವಿಲ್ಲವಂತೆ, ಇಲ್ಲಿಯೇ ನಿನ್ನನ್ನು ಯಮಪುರಿಗೆ ಕಳುಹಿಸುವೆನು.

ಅವಳು ಪಿಸ್ತೂಲಿನಿಂದ ಅವನನ್ನು ಹೊಡೆಯಬೇಕೆಂದು ಪ್ರಯತ್ನ ಮಾಡುವುದರೊಳಗಾಗಿಯೇ, ಶಂಬರನು ಏಟುತಿಂದ ಹುಲಿಯಂತೆ ನುಗ್ಗಿ, ಅವಳನ್ನು ಕೆಡವಿ, ಪಿಸ್ತೂಲನ್ನು ಅವಳಕೈಯಿಂದ ಕಿತ್ತುಕೊಂಡು, ಅವಳ ಕತ್ತನ್ನು ಕಿವಿಚಿದನು. ಅವಳು ಉಸಿರುಸಿಕ್ಕಿಕೊಂಡು ಸತ್ತಂತೆ ಬಿದ್ದಳು. ಅಲ್ಲಿಂದ ಕಾಗದ ಪತ್ರಗಳನ್ನು ತೆಗೆದುಕೊಂಡು ಶಂಬರನು ಹೊರಟು ಹೋದನು.

## ಅಧ್ಯಾಯ. ೧೩.

ಪರಂತಪನು ರತ್ನಾಕರಕ್ಕೆ ಹೊರಟುಹೋದ ರಾತ್ರಿ, ಕಾಮಮೋಹಿನಿಯು, ತನ್ನ ಗಂಡನಿಗೆ ಏನು ಅನರ್ಥಗಳುಂಟಾಗುವುವೋ ಎಂದು, ಅಸಾಧಾರಣವಾದ ಭಯದಿಂದ ಪೀಡಿತಳಾಗಿದ್ದಳು. ಬೆಳಗಾಗುತ್ತಲೂ ನನ್ನ ಗಂಡನು ಬರುವನೆಂದು, ಅವನ ಆಗಮನವನ್ನು ನಿರೀಕ್ಷಿಸುತ್ತ ಇದ್ದಳು. ಸೂರ್ಯೋದಯವಾಯಿತು. ಸೂರ್ಯನು ನೆತ್ತಿಯ ಮೇಲಕ್ಕೆ ಬಂದನು. ಪರಂತಪನು ಮಾತ್ರ

ಹಿಂದಕ್ಕೆ ಬರಲಿಲ್ಲ. ಆತನು ಬರಲಿಲ್ಲವೆಂದು ನಿಟ್ಟುಸಿರು ಬಿಡುತ ಶೋಕಪರವಶಳಾಗಿರುವ ಕಾಮಮೋಹಿನಿಯನ್ನು, ಸತ್ಯಶರ್ಮನನ್ನು ನೋಡಿ " ಇಲ್ಲಿಗೂ ರತ್ನಾಕರಕ್ಕೂ ಬಹಳ ದೂರವಿರುವುದು. ನಿನ್ನ ಗಂಡನು ಇದನ್ನು ತಿಳಿದುಕೊಳ್ಳದೆ, ಜಾಗ್ರತೆಯಾಗಿ ಬರುವುದಾಗಿ ಹೇಳಿಹೋದನು ಜಾಗ್ರತೆಯಾಗಿ ಬರುವನು. ದುಃಖವನ್ನು ಸಮಾಧಾನಮಾಡಿಕೋ" ಎಂದು ಹೇಳಿ, ಸಮಾಧಾನಪಡಿಸುವುದಕ್ಕೆ ಪ್ರಯತ್ನಮಾಡಿದನು.

**ಕಾಮಮೋಹಿನಿ**—ವಿಚಾರಪಡದೆ ಇರುವುದು ಅಸಾಧ್ಯ. ನನ್ನ ಗಂಡನಿಗೆ ಏನೋ ಒಂದು ವಿಪತ್ತು ಸಂಭವಿಸಿರಬಹುದು. ಹಾಗಿಲ್ಲದ ಪಕ್ಷದಲ್ಲಿ ಇಷ್ಟು ಸಾವಕಾಶವಾಗುತ್ತಿರಲಿಲ್ಲ. ನಾನು ಬಹಳ ನಿರ್ಭಾಗ್ಯಳು. ಏನೋ ಪಾಪಶೇಷದ ಫಲವನ್ನು ಅನುಭವಿಸತಕ್ಕ ಕಾಲವು ನನಗೆ ಬಂದಿರುವಂತೆ ಕಾಣುತ್ತದೆ.

**ಸತ್ಯಶರ್ಮ**—ಎಲೌ ಪ್ರಿಯಳಾದ ಮಗುವೆ! ಈ ಶೋಕಾತಿಶಯದಿಂದ ಪರಿತಪಿಸಬೇಡ ಸ್ವಲ್ಪ ನಿಧಾನಿಸಿಕೋ. ಆತನು ಬಾರದೆಹೋದ ಪಕ್ಷದಲ್ಲಿ, ನಾನೇ ಹೋಗಿ ಅವನನ್ನು ಕರೆದುಕೊಂಡು ಬರುತ್ತೇನೆ.

**ಕಾಮಮೋಹಿನಿ**—ಎಲೈ ತಂದೆಯೇ! ನನ್ನ ಗಂಡನು ಒಂದುವೇಳೆ ಹಿಂದಿರುಗಿ ಬಾರದೆ ಇದ್ದರೆ, ನನ್ನನ್ನು ನಿನ್ನ ಮಗಳೆಂದು ತಿಳಿದುಕೊಂಡು ನೀನೇ ಕಾಪಾಡಬೇಕು. ನೀನೇ ನನ್ನ ತಂದೆ, ಈಕೆಯೇ ನನ್ನ ತಾಯಿ. ನನ್ನ ಗಂಡನು ಕೊಟ್ಟಿರತಕ್ಕ ಈ ದ್ರವ್ಯವನ್ನು ಇಟ್ಟುಕೊಂಡು, ನನ್ನನ್ನು ಮಾನದಿಂದ ಕಾಪಾಡಬೇಕು.

**ಸತ್ಯಶರ್ಮ**—ಎಲೌ ಪತಿವ್ರತಾಶಿರೋಮಣಿಯೇ! ಇಂಥ ಕೆಟ್ಟ ಯೋಚನೆಗಳನ್ನು ಏತಕ್ಕೆ ಮಾಡುತ್ತೀಯೆ ? ನಿನ್ನ ಗಂಡನು ಶೀಘ್ರದಲ್ಲಿಯೇ ಬರುವನು. ಆತನು ಹಾಗೆ ಬಾರದಿದ್ದರೆ, ನಾನೇ ಹೋಗಿ ಅವನನ್ನು ಕರೆದುಕೊಂಡು ಬರುವ ಪ್ರಯತ್ನವನ್ನು ಮಾಡುವೆನು. ಕ್ಲೇಶಪಡಬೇಡ.

ಈ ಉಪದೇಶದಿಂದ, ಕಾಮಮೋಹಿನಿಯು ನಾಲ್ಕು ಘಂಟೆಯವರೆಗೂ ಸಮಾಧಾನವನ್ನು ವಹಿಸಿದಳು. ಪರಂತಪನು ಬರಲಿಲ್ಲ. ಅವಳ ಶೋಕವು ಇಮ್ಮಡಿಯಾಯಿತು. ಉಪಶಮನದ ಮಾತುಗಳು ಪ್ರಯೋಜನಕರವಾಗಲಿಲ್ಲ. ಹೊಸದಾಗಿ ಪಂಜರದಲ್ಲಿ ಕೂಡಲ್ಪಟ್ಟ ಪಕ್ಷಿಯಂತಿದ್ದಳು.

ಇವಳ ತಾಪವನ್ನು ನೋಡಿ, ಸತ್ಯಶರ್ಮನು ರತ್ನಾಕರಕ್ಕೆ ಪ್ರಯಾಣಮಾಡಿದನು. ಸತ್ಯಶರ್ಮನು ಹೊರಟುಹೋದ ಸ್ವಲ್ಪಹೊತ್ತಿನಲ್ಲೇ, ಕಾಮಮೋಹಿನಿಗೆ ಬರೆಯಲ್ಪಟ್ಟ ಮೇಲುವಿಳಾಸವುಳ್ಳ ಒಂದು ಲಕೋಟು ಕಿಟಕಿಯಿಂದ ಮನೆಯೊಳಕ್ಕೆ ಬಿದ್ದಿತು. ಸತ್ಯಶರ್ಮನ ಹೆಂಡತಿಯು, ಅದನ್ನು ತೆಗೆದುಕೊಂಡು ಮೇಲುವಿಳಾಸವನ್ನು ನೋಡಿ, ಕಾಮಮೋಹಿನಿಗೆ ಕೊಟ್ಟಳು. ಅವಳು ಬಹಳ ಆತುರದಿಂದ ಲಕ್ಕೋಟನ್ನು ಒಡೆದು ಓದಿ, ಸಿಡಿಲಿನಿಂದ ಹೊಡೆಯಲ್ಪಟ್ಟಂತೆ ಮೂರ್ಛಿತಳಾದಳು. ಅದರಲ್ಲಿ ಬರೆದಿದ್ದುದೇನೆಂದರೆ:—

ಕಾಮಮೋಹಿನಿ !

ನಿನ್ನ ಗಂಡನು ರತ್ನಾಕರಕ್ಕೆ ಹೋಗಬೇಕೆಂದು ನನ್ನನ್ನು ಕರೆದನು. ಈ ಸ್ಥಳವು ಭೂತ ಪ್ರೇತ ಪಿಶಾಚಗಳಿಂದ ತುಂಬಲ್ಪಟ್ಟಿದೆಯೆಂಬುದಾಗಿಯೂ, ಅಲ್ಲಿಗೆ ಹೋದರೆ ಪ್ರಾಣವೇ ಉಳಿಯಲಾರದೆಂಬುದಾಗಿಯೂ ನಾನು ಹೇಳಿದೆನು. ನನ್ನ ಮಾತುಗಳನ್ನು ಅವನು ನಿರಾಕರಿಸಿದನು. ರತ್ನಾಕರದ ಬಂಗಲೆಗೆ ಇವನು ಪ್ರಥಮತಃ ಪ್ರವೇಶಿಸಿದನು. ಕೂಡಲೆ ಒಂದು ಭಯಂಕರವಾದ ಭೂತವು ಬಂದಿತು. ಅದನ್ನು ನೋಡಿದ ಕೂಡಲೆ, ನಾನು ಭಯಪಟ್ಟು ಓಡಿಹೋದೆನು. ಪರಂತಪನು ಅದರೊಡನೆ ಕಾದುವುದಕ್ಕೆ ಉದ್ಯೋಗಮಾಡಿದನು. ಅದು ಅವನನ್ನು ಅಂತರಿಕ್ಷಕ್ಕೆ ಎತ್ತಿಕೊಂಡುಹೋಗಿ ಅವನನ್ನು ಕೊಂದುಬಿಸುಟಿತು. ಅವನ ಶವವು ರತ್ನಾಕರದ ಪಶ್ಚಿಮದಲ್ಲಿರುವ ಸಮುದ್ರಕ್ಕೆ ಬಿದ್ದು ಜಲಚರಗಳಿಗೆ ಆಹಾರವಾಯಿತು. ಮಿತ್ರನನ್ನು ಕಳೆದುಕೊಂಡ ನನಗೆ ಎಷ್ಟೋ ಸಂಕಟವಾಗುತ್ತದೆ. ಇಂಥ ಪತಿಯನ್ನು ಕಳೆದುಕೊಂಡ ನಿನ್ನ ದುಃಖಕ್ಕೆ ಪಾರವೇ ಇಲ್ಲ. ದೇವರು ನಿನ್ನನ್ನು ಕಾಪಾಡಬೇಕು. ಅವನಿಗೆ ಕ್ರಿಯಾದಿಗಳನ್ನು ಮಾಡಿ ಸದ್ಗತಿಯನ್ನು ಕಾಣಿಸು. ನಾನು ನನ್ನ ದೇಶಕ್ಕೆ ಹೋಗುವೆನು.

ಅರ್ಥಪರ

ಮೂರ್ಛೆಹೋಗಿದ್ದ ಕಾಮಮೋಹಿನಿಗೆ, ಸತ್ಯಶರ್ಮನ ಹೆಂಡತಿಯು ಅನೇಕ ಶೈತ್ಯೋಪಚಾರಗಳನ್ನು ಮಾಡಿದಳು. ಅವಳು ಸ್ವಲ್ಪ ಚೇತರಿಸಿಕೊಳ್ಳುತಲೂ, ಪುನಃ ಮೂರ್ಛೆಹೊಂದುತಲೂ, ರಾತ್ರಿ ಹನ್ನೆರಡು ಘಂಟೆಯವರೆಗೂ ಬಹಳ ವ್ಯಾಕುಲಪಡುತ, ಗಳಿಗೆಗೊಂದುಸಲ ಮೂರ್ಛೆಯನ್ನೂ ಪ್ರಜ್ಞೆಯನ್ನೂ ಅನುಭವಿಸುತಿದ್ದಳು. ಕೊನೆಗೆ ಸತ್ಯಶರ್ಮನು ಪರಂತಪನ

ಪೂರ್ವಾಪರಗಳನ್ನು ಭೇದಿಸಲಸಾಧ್ಯವಾದುದರಿಂದ, ರತ್ನಾಕರದಿಂದ ಹಿಂದಕ್ಕೆ ಬಂದನು. ಆಗ ಅವನ ಹೆಂಡತಿಯು, ಆ ಕಾಗದದ ವೃತ್ತಾಂತವನ್ನು ತಿಳಿಯಿಸಿದಳು. ಆಗ ಸತ್ಯಶರ್ಮನು ಆ ಕಾಗದವನ್ನು ತೆಗೆದು ನೋಡಿ "ಇದು ಅರ್ಥಪರನ ಅಕ್ಷರವೂ ಅಲ್ಲ; ಅವನ ರುಜುವೂ ಅಲ್ಲ. ಯಾರೋ ದುರಾತ್ಮರು ಇವಳನ್ನು ಕ್ಲೇಶಪಡಿಸುವುದಕ್ಕೆ ಹೀಗೆ ಬರೆದಿರಬಹುದು." ಎಂದು ಗೊತ್ತುಮಾಡಿ, ಈ ಅಂಶವನ್ನು, ಪ್ರಜ್ಞೆಬಂದಾಗ ಕಾಮಮೋಹಿನಿಗೆ ತಿಳಿಸಿದನು. ಅದರಿಂದ ಪ್ರಯೋಜನವಾಗಲಿಲ್ಲ. ಆಗ ಸತ್ಯಶರ್ಮನು ಒಬ್ಬ ವೈದ್ಯನನ್ನು ಕರೆತಂದು ತೋರಿಸಿದನು. ಅವನು ಇವಳ ದೇಹಸ್ಥಿತಿಯನ್ನು ಪರೀಕ್ಷಿಸಿ, ಸದ್ಯಕ್ಕೆ ಸಿದ್ಧಬರುವ ಔಷಧಿಯನ್ನು ಕೊಟ್ಟು, ಬೆಳಗ್ಗೆ ನೋಡಿ ಚಿಕಿತ್ಸೆ ಮಾಡುವಂತೆ ಹೇಳಿ, ಹೊರಟುಹೋದನು.

ಅಷ್ಟರಲ್ಲೇ ಬಾಗಿಲು ಬಲವಾಗಿ ತಟ್ಟಲ್ಪಟ್ಟಿತು. ಪರಂತಪನು ಬಂದನೆಂದು, ಸತ್ಯಶರ್ಮನು ಜಾಗ್ರತೆಯಾಗಿ ಹೋಗಿ ಬಾಗಿಲು ತೆಗೆದನು. ವೇಷಧಾರಿಗಳಾದ ಹನ್ನೆರಡು ಜನಗಳೊಡನೆ ಶಂಬರನು ಒಳಕ್ಕೆ ಪ್ರವೇಶಿಸಿದನು.

**ಸತ್ಯಶರ್ಮ**—ಅಯ್ಯಾ! ನೀನಾರು? ಇಲ್ಲಿಗೆ ಇಷ್ಟು ಅವೇಳೆಯಲ್ಲಿ ಏಕೆ ಬಂದೆ? ನಿನಗೇನು ಬೇಕು?

**ಶಂಬರ**—ಕಳ್ಳ! ನನ್ನನ್ನು ನೀನು ಕಾಣೆಯೋ? ನಾನು ಶಂಬರ; ಕಾಮಮೋಹಿನಿಯ ಪೋಷಕ. ನೀನು ಅವಳನ್ನು ಕಳ್ಳತನದಿಂದ ತಂದು ಇಲ್ಲಿಟ್ಟುಕೊಂಡಿರುವುದು ನನಗೆ ಗೊತ್ತಾಯಿತು. ನಿನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಶೀಘ್ರದಲ್ಲೇ ಹೊಂದುವೆ.

**ಸತ್ಯಶರ್ಮ**—ಓಹೋ! ಶಂಬರನೆ? ಈಗ ಗೊತ್ತಾಯಿತು. ದ್ರವ್ಯಾರ್ಥವಾಗಿ ದೊಡ್ಡಪ್ಪನನ್ನು ಕೊಂದ ಪುತ್ರಾಧಮನು ನೀನಲ್ಲವೆ! ಕಲಾವತಿಯ ಕತ್ತುಮಿಸುಕಿ ಸುಮಿತ್ರನ ಉಯಿಲನ್ನು ಅಪಹರಿಸಿದ ಚಂಡಾಲನು ನೀನಲ್ಲವೆ! ಕಲಾವತಿಯನ್ನು ವಿವಾಹಮಾಡಿಕೊಳ್ಳುವುದಾಗಿ ಮಾತುಕೊಟ್ಟು ಅದಕ್ಕೆ ತಪ್ಪಿ ಪರಸ್ತ್ರೀಯಾದ ಕಾಮಮೋಹಿನಿಯನ್ನು ಅಪಹರಿಸಬೇಕೆಂದು ಈ ಕಾಗದವನ್ನು ಬರೆದು ಕಿಟಕಿಯಿಂದ ಹಾಕಿ ಅವಳು ವ್ಯಾಕುಲಳಾಗಿ ಮೂರ್ಛಿತಳಾಗುವಂತೆ ಮಾಡಿರುವ ದುರಾತ್ಮನು ನೀನಲ್ಲವೆ! ನೀನೇ ಪರಂತಪನನ್ನು ಕೊಂದು, ಅರ್ಥಪರ ಬರೆದಂತೆ ಈ ಕಾಗದವನ್ನು ಬರೆದಿರ

ಬಹುದು. ಶೀಘ್ರದಲ್ಲೇ ದೇವರು ನಿನ್ನ ಪಾಪಕೃತ್ಯಗಳಿಗೆ ತಕ್ಕ ಪ್ರತೀಕಾರವನ್ನು ಮಾಡುವನು ನಾನು ಕಳ್ಳನೆ? ದುರಾತ್ಮನೆ! ಇಲ್ಲಿಂದ ಆಚೆಗೆ ತೆರಳು. ಇಲ್ಲದಿದ್ದರೆ ಪೋಲೀಸಿನವರಿಗೆ ನಿನ್ನನ್ನು ಕೊಡುವೆನು. ನೀನು ಕಾಮಮೋಹಿನಿಯ ಪೋಷಕನಲ್ಲ. ಅವಳ ಭಾಗದ ಮೃತ್ಯುವೇ ನೀನು.

**ಶಂಬರ**—ಅವಳೆಲ್ಲಿದ್ದಾಳೆ?-ತಿಳಿಸು. ಹಾಗಿಲ್ಲದಿದ್ದರೆ, ನಿನ್ನ ಭಾಗಕ್ಕೂ ನಾನು ಮೃತ್ಯುವಾಗುವೆನು.

**ಸತ್ಯಶರ್ಮ**—ನನ್ನ ಪ್ರಾಣವಿರುವವರೆಗೂ ಅವಳು ನಿನಗೆ ಸಿಕ್ಕಳು.

**ಶಂಬರ**—ಹಾಗಾದರೆ, ನಿನ್ನ ಪ್ರಾಣವು ಈಗಲೇ ಹೋಗುವುದು. ಅದು ಹಾಗಿರಲಿ; ನಿನಗೆ ಪ್ರಾಣದಾನವನ್ನು ಮಾಡುವುದಲ್ಲದೆ, ತುಂಬ ಉಪಕಾರವನ್ನೂ ಮಾಡುವೆನು ಕಾಮಮೋಹಿನಿಯು ಪರಸ್ತ್ರೀಯೆಂದೆಯಲ್ಲಾ! ಅದು ಹೇಗೆ?

**ಸತ್ಯಶರ್ಮ**—ಅವಳನ್ನು ಪರಂತಪನು ವಿವಾಹಮಾಡಿಕೊಂಡಿರುವನು.

**ಶಂಬರ**—ಈ ವಿವಾಹವು ಎನ್ನಾಯಿತು? ಯಾರು ಮಾಡಿಸಿದವರು? ಯಾವಾಗ?

**ಸತ್ಯಶರ್ಮ**—ಕಳೆದ ತಿಂಗಳು, ನಾನೇ ಈ ಮನೆಯಲ್ಲೇ ಮಾಡಿಸಿದೆನು.

**ಶಂಬರ**—ಎಲಾ ದುಷ್ಟನೆ! ಈ ದುಷ್ಕೃತ್ಯಕ್ಕೆ ತಕ್ಕ ಫಲವನ್ನು ಹೊಂದುವೆ.

ಸತ್ಯಶರ್ಮನನ್ನೂ ಅವನ ಹೆಂಡತಿಯನ್ನೂ ಹಿಡಿಸಿ, ಬಾಯಿಗೆ ಬಟ್ಟೆ ತುರುಕಿ, ಕೈಕಾಲುಗಳನ್ನು ಕಟ್ಟಿ ಕೆಡವಿ, ಕಾಮಮೋಹಿನಿಯನ್ನು ಹುಡುಕಿ ಎತ್ತಿಕೊಂಡು ಗಾಡಿಯಲ್ಲಿ ಹಾಕಿಸಿ, ಸತ್ಯಶರ್ಮನ ಮನೆಗೆ ಅನೇಕ ಭಾಗಗಳಲ್ಲಿ ಬೆಂಕಿಯನ್ನು ಹಾಕಿಸಿ, ಅದು ಹೊತ್ತಿಕೊಂಡು ಉರಿಯುವುದಕ್ಕೆ ಉಪಕ್ರಮವಾದಮೇಲೆ, ಶಂಬರನು ರತ್ನಾಕರದ ಕಡೆಗೆ ಹೊರಟುಹೋದನು. ಮಾರನೆಯ ದಿನ ಬೆಳಗಾಗುವುದರೊಳಗಾಗಿ, ಮನೆಯು ಬೆಂದು ನೆಲಸಮವಾಗಿತ್ತು ಸರಕಾರದವರೂ ಪಂಚಾಯಿತರೂ ಸೇರಿ ಪರೀಕ್ಷಿಸಿ, ಮನೆಗೆ ಬೆಂಕಿ ಬಿದ್ದು ಮನೆಯಲ್ಲಿದ್ದ ಸತ್ಯಶರ್ಮಾದಿಗಳು ಸತ್ತುಹೋದರೆಂದು ಮಹಜರ್‌ಮಾಡಿದರು!

## ಅಧ್ಯಾಯ. ೧೩.

ಮಾರನೆಯ ದಿನ ಸಾಯಂಕಾಲ, ಶಂಬರನು ರತ್ನಾಕರದಲ್ಲಿ ಕಾಮಮೋಹಿನಿಯನ್ನು ಇಟ್ಟು, ಅಲ್ಲಿಂದ ತನ್ನ ಮನೆಗೆ ಬಂದನು. ಅವನು, ತಾನು ಮಾಡಿದ ದುಷ್ಕೃತ್ಯಗಳಿಗೆ ಏನು ಪ್ರತಿಕಾರವಾಗುವುದೋ ಎಂದು ಭಯಪಡುತ್ತಲೇ ಇದ್ದನು. ಆಗ ಕಲಾವತಿಯು ತಾನು ಕತ್ತು ಮಿಸುಗಿದ್ದರಿಂದ ಸಾಯಲಿಲ್ಲವೆಂಬುದಾಗಿ ಗೊತ್ತಾಯಿತು. ಬಳಿಕ ಬಹಳ ವ್ಯಸನಾಕ್ರಾಂತನಾಗಿ ನಿಟ್ಟುಸಿರನ್ನು ಬಿಟ್ಟು, ತಾನು ಮಾಡಿದ ಕೃತ್ಯವನ್ನು ಇವಳು ಬೈಲುಮಾಡುವಳೆಂಬುದಾಗಿಯೂ, ಅದರಿಂದ ತನಗೆ ತೊಂದರೆಯುಂಟಾಗುವುದೆಂಬುದಾಗಿಯೂ ಭಯಪಟ್ಟನು.

ಆಗ "ಕಲಾವತಿ ಸಾಯಲಿಲ್ಲ. ಅವಳು ಸತ್ತಿದ್ದರೆ ಚೆನ್ನಾಗಿತ್ತು. ಅವಳು ಜೀವಂತಳಾಗಿರುವವರೆಗೂ ನನಗೆ ಬಹಳ ವಿಪತ್ತುಂಟು. ನಾನು ಅವಳಿಗೆ ಮಾಡಿದ ಅಪಕಾರವನ್ನು ಅವಳು ಎಂದಿಗೂ ಮರೆಯಳು. ಇನ್ನೇನು ಪ್ರಮಾದಬರುವುದೋ ತಿಳಿಯದು. ನಾನು ಮಾಡಿದ ಸಂಕಲ್ಪವು ಘಟಿಸಲಿಲ್ಲ. ದೈವಚಿತ್ತವು ಬೇರೆಯಾಯಿತು. ಈಗ ಭಯಪಟ್ಟು ಪ್ರಯೋಜನವಿಲ್ಲ. ನನ್ನ ಕರ್ಮಫಲವನ್ನು ನಾನೇ ಅನುಭವಿಸಬೇಕು!" ಇತ್ಯಾದಿ ರೀತಿಯಲ್ಲಿ ಚಿಂತಿಸುತಿದ್ದನು.

ಈರೀತಿಯಾಗಿ ತನ್ನಲ್ಲಿ ತಾನೇ ಮಾತನಾಡಿಕೊಳ್ಳುತ್ತಿರುವಾಗ, ಕಲಾವತಿಯ ಜವಾನನು ಬಂದನು.

**ಶಂಬರ**—ಏನಯ್ಯ! ನಿನ್ನ ಯಜಮಾನತಿಯು ಎಲ್ಲಿರುವಳು?

**ಜವಾನ**— ಅವಳು ಹೊರಟುಹೋದಳು, ಸ್ವಾಮಿ!

**ಶಂಬರ**—ಹೊರಟುಹೋದಳೇ! ಎಲ್ಲಿಗೆ ಹೋದಳು?

**ಜವಾನ**—ನನಗೆ ತಿಳಿಯದು. ಆಕೆ ನನಗೆ ಹೇಳಲಿಲ್ಲ. ಹೊರಟು ಹೋಗುವಾಗ, ಆಕೆಯು ಒಂದು ಚೀಲವನ್ನು ತೆಗೆದುಕೊಂಡು ಹೋದಳು.

**ಶಂಬರ**—ಹೊರಟುಹೋಗುವಾಗ ನನಗೆ ಏನಾದರೂ ಸಮಾಚಾರವನ್ನು ಹೇಳಿ ಹೋದಳೋ?

**ಜವಾನ**—ತಮಗೆ ಕೊಡಬೇಕೆಂದು ಒಂದು ಕಾಗದವನ್ನು ಕೊಟ್ಟಿರುತ್ತಾಳೆ.

ಎಂದು ಹೇಳಿ, ಕಲಾವತಿಯ ಕಾಗದವನ್ನು ಒಪ್ಪಿಸಿ ಹೊರಟು ಹೋದನು. ಶಂಬರನು ಲಕ್ಕೋಟನ್ನು ಒಡೆದು ಓದಿದನು. ಅವರಲ್ಲಿ ಬರೆದಿದ್ದುದೇನೆಂದರೆ:—ಖೂನಿಗಳನ್ನು ಮಾಡುವುದರಲ್ಲಿ ಸಮರ್ಥನಾದ ಕೃತಘ್ನ ಶಂಬರನೇ! ಈದಿನ ನಾನು ತಂದೆಯ ಮನೆಯನ್ನು ಬಿಟ್ಟು ಹೊರಟುಹೋಗಿರುತ್ತೇನೆ. ಇನ್ನೆಷ್ಟು ದಿವಸಗಳು ನಿನಗೆ ಆಯುಸ್ಸು ಇರುತ್ತದೆಯೋ, ಅಷ್ಟು ದಿವಸಗಳು ನನ್ನ ಮನೆಯನ್ನೂ ಆಸ್ತಿಯನ್ನೂ ನೀನು ಅನುಭವಿಸಬಹುದು. ಆದರೆ, ನಿನ್ನ ಆಯುಸ್ಸು ಮಿತವಾಗಿರುವುದು ನಿನ್ನ ದೇಹವು ಜೀವವನ್ನು ಧರಿಸಿಕೊಂಡಿರುವಾಗಲೇ, ನೀನು ನಿನ್ನ ದುಷ್ಕೃತ್ಯಗಳಿಗೆ ಪರಿಹಾರವನ್ನು ಮಾಡಿಕೊಳ್ಳಲು ಶಕ್ತಿಯಿದ್ದರೆ ಮಾಡಿಕೋ. ನನಗಿದ್ದ ದ್ರವ್ಯವನ್ನೆಲ್ಲ ನಾನು ತೆಗೆದುಕೊಂಡಿರುವೆನು. ಇದರಲ್ಲಿ ಒಂದು ಕಾಸೂ ನಿನಗೆ ಸಿಕ್ಕುವುದಿಲ್ಲ. ಜಾಗರೂಕನಾಗಿರು. ಕಲಾವತಿಯು ಸಾಮಾನ್ಯಳಲ್ಲ. ದುರ್ಮಾರ್ಗರನ್ನು ಯಮಪುರಿಗೆ ಕಳುಹಿಸುವುದಕ್ಕೋಸ್ಕರ ಹುಟ್ಟಿರತಕ್ಕ ಮೃತ್ಯುವೇ ಕಲಾವತಿ-ಎಂದು ತಿಳಿದುಕೋ. ನಿನ್ನ ಪಾಪಕೃತ್ಯಗಳಿಗೆ ಅನುರೂಪವಾದ ಯಾತನೆಗಳನ್ನನುಭವಿಸುವುದಕ್ಕೋಸ್ಕರ-ನಿನ್ನನ್ನು ಕೆಲವು ಘಂಟೆಗಳೊಳಗಾಗಿಯೇ ನರಕಕ್ಕೆ ಕಳುಹಿಸದಿದ್ದರೆ, ನಾನು ಸತ್ಯಶರ್ಮನ ಮಗಳೇ ಅಲ್ಲ.

**ಕಲಾವತಿ**

ಈ ಕಾಗದವನ್ನು ಓದಿ, ಅತ್ಯಂತ ಆಗ್ರಹದಿಂದ, ಅದನ್ನು ಶಂಬರನು ಛಿದ್ರಛಿದ್ರವಾಗಿ ಹರಿದು ಬಿಸುಟನು. ಆಮೇಲೆ ಆತ್ಮಗತವಾಗಿ "ಇವಳು ಮಹಾ ಪಾಪಿಷ್ಠಹೆಂಗಸು. ನೂರುಜನ ಕಿರಾತರೊಡನೆ ಯುದ್ಧಮಾಡುವುದು ಸುಲಭ; ಈ ಚಂಡಾಲಸ್ತ್ರೀಗೆ ಪ್ರತಿಭಟನಾಗಿರುವುದು ಕಷ್ಟ. ಇರಲಿ, ಇವಳನ್ನೇ ಯಮಪುರಿಗೆ ಕಳುಹಿಸುವೆನು." ಎಂದು ಆಲೋಚಿಸಿದನು.

**ಕಲ್ಯಾಣಪುರದ** ಭೋಜನಶಾಲೆಯಲ್ಲಿ, ಪರಂತಪನ ಭೃತ್ಯನಾದ **ಮಂಜೀರಕನು** ಆಗತಾನೆ ಬಂದು ಇಳಿದನು ಆ ಭೋಜನ ಗೃಹದ ಎಲ್ಲಾ ಕೊಟ್ಟಡಿಗಳಿಗೂ ಹೋಗಿ ಹುಡುಕಿ, ತಾನು ಯಾರನ್ನುಹುಡುಕುತಿದ್ದನೋ

ಆ ಮನುಷ್ಯನು ಸಿಕ್ಕದೆ ಹೋದುದರಿಂದ, ಆ ಭೋಜನಶಾಲೆಯ ಯಜಮಾನನ ಕೊಟ್ಟಡಿಗೆ ಹೋದನು.

**ಮಂಜೀರಕ**— ಈ ಭೋಜನಶಾಲೆಯ ಯಜಮಾನನು ನೀನೇ ಅಲ್ಲವೆ?

**ಯಜಮಾನ**—ಅಹುದು ! ನೀನು ಯಾರನ್ನೋ ಹುಡುಕಿಕೊಂಡು ಬಂದಿರುವಂತೆ ಕಾಣುತ್ತದೆ. ಯಾರನ್ನು ಹುಡುಕುತ್ತೀಯೆ?

**ಮಂಜೀರಕ**—ಈಗ ಕೆಲವು ದಿವಸಗಳ ಕೆಳಗೆ ನಾನೂ ನನ್ನ ಯಜಮಾನನೂ ಇಲ್ಲಿಗೆ ಬಂದಿದ್ದೆವು. ನನ್ನ ಯಜಮಾನನು ಒಂದು ಶವವನ್ನು ತಂದು ಇಲ್ಲಿ ಇಳಿದಿದ್ದನು. ಅವನ ಪೂರ್ವೋತ್ತರಗಳನ್ನು ಬಲ್ಲೆಯಾ?

**ಯಜಮಾನ** —ಮಾಧವನ ಶವವನ್ನು ತಂದಿದ್ದವನೋ ?

**ಮಂಜೀರಕ** — ಅಹುದು.

**ಯಜಮಾನ** — ಅವನ ಹೆಸರು ಪರಂತಪನೋ?

**ಮಂಜೀರಕ**— ಅಹುದು.

**ಯಜಮಾನ** —ಅವನು ಸುಮಿತ್ರನ ಮನೆಯಲ್ಲಿ ಇಳಿದಿದ್ದನು. ಅವನಿಗೂ ಶಂಬರನಿಗೂ ದ್ವಂದ್ವಯುದ್ಧವಾಯಿತು, ನಾನು ಅವನ ಸಕ್ಷವಾಗಿ ಪಂಚಾಯಿತನಾಗಿದ್ದೆನು. ಅವನು ಶಂಬರನನ್ನು ಗುಂಡಿನಿಂದ ಹೊಡೆದು ಅವ ಯಮಹೋನನನ್ನಾಗಿ ಮಾಡಿದನು ಶಂಬರನ ಗುಂಡು ಸುಮಿತ್ರನಿಗೆ ತಗುಲಿ ಅವನನ್ನು ಕೊಂದಿತು.

**ಮಂಜೀರಕ**— ಈ ಪರಂತಪನು ಈಗ ಎಲ್ಲಿರುವನು ?

**ಯಜಮಾನ**—ಅವನು ರತ್ನಾಕರಕ್ಕೆ ಹೋದನು. ತದಾರಭ್ಯ ಅವನ ವಿಷಯವೇ ನನಗೆ ತಿಳಿಯದು.

**ಮಂಜೀರಕ**— ಅವನ ಜತೆಯಲ್ಲಿ ಯಾರಾದರೂ ಹೋದರೋ?

**ಯಜಮಾನ**—ಅರ್ಥಪರನೆಂಬ ಲಾಯರು ಅವನ ಜತೆಯಲ್ಲಿ ಹೋದನು.

**ಮಂಜೀರಕ**—ಆ ಅರ್ಥಪರನು ವಾಪಸು ಬಂದನೋ ?

**ಯಜಮಾನ**—ಅವನನ್ನು ನಾನು ಕಾಣಲಿಲ್ಲ. ಅಲ್ಲಿಗೆ ಹೋಗುವಾಗ, ಪರಂತಪನು “ ನಾನು ರತ್ನಾಕರದಿಂದ ವಾಪಸು ಬಾರದಿದ್ದರೆ ಶಂಬರನಿಂದ ಮರಣವನ್ನು ಹೊಂದಿರುವೆನೆಂದು ನೀನು ತಿಳಿದುಕೊಳ್ಳಬಹುದು ” ಎಂಬು

ದಾಗಿ ನನ್ನ ಸಂಗಡ ಹೇಳಿದ್ದನು. ನೀನು ನಾಳೆ ಬೆಳಗ್ಗೆ ಬಂದರೆ, ಪರಂತಪನ ಪೂರ್ವಾಪರಗಳನ್ನು ವಿಚಾರಿಸಿ ವಿಶದವಾಗಿ ನಿನಗೆ ಹೇಳುವೆನು.

ಮಂಜೀರಕನು ಅವನ ಅಪ್ಪಣೆಯನ್ನು ತೆಗೆದುಕೊಂಡು ತನ್ನ ಕೊಟ್ಟಡಿಗೆ ಹೋಗುತ್ತಿರುವಾಗ, ಒಬ್ಬ ಯೌವನಸ್ಥನು ಇವರ ಮಾತುಗಳನ್ನು ಕೇಳುತಿದ್ದು ಇವನೊಡನೆ ಮಾತನಾಡುವುದಕ್ಕೆ ಉಪಕ್ರಮಿಸಿದನು.

**ಯೌವನಸ್ಥ**—ನೀನು ಭೋಜನಶಾಲೆಯ ಯಜಮಾನನೊಡನೆ ಆಡುತಿದ್ದ ಮಾತುಗಳನ್ನು ಕೇಳುತಿದ್ದೆನು ನೀನು ಪರಂತಪನನ್ನು ಹುಡುಕಿಕೊಂಡು ಬಂದಿರುವೆಯಲ್ಲವೆ?

**ಮಂಜೀರಕ**—ಅಹುದು ! ಅತನ ಪೂರ್ವೋತ್ತರಗಳೇನಾದರೂ ನಿನಗೆ ತಿಳಿಯುವುವೆ ?

**ಯೌವನಸ್ಥ**—ನನಗೆ ಬಹಳ ಸ್ವಲ್ಪ ತಿಳಿಯುವುವು. ಅವನು ಈ ಕಲ್ಯಾಣಪುರಕ್ಕೆ ಬಂದಾಗ, ನನಗೂ ಅವನಿಗೂ ಪರಿಚಯುನಾಯಿತು. ಕಳೆದ ಎಂಟು ದಿವಸಗಳಿಂದ ಅವನ ಸಮಾಚಾರವೇ ಇಲ್ಲ. ಅವನಿಗೇನೋ ವಿಪತ್ತು ಸಂಭವಿಸಿರುವುದೆಂದು ತೋರುತ್ತದೆ.

**ಮಂಜೀರಕ**—ಹಾಗೆಂದರೇನು! ಮಹಾತ್ಮರಿಗೆ ವಿಪತ್ತು ಸಂಭವಿಸುವುದೇ? ಇದನ್ನು ನಾನು ಎಂದಿಗೂ ನಂಬಲಾರೆನು

**ಯೌವನಸ್ಥ**—ನೀನು ನನ್ನ ಕೊಟ್ಟಡಿಗೆ ಬಂದರೆ, ಈ ವಿಷಯುವನ್ನು ಕುರಿತು ವಿಸ್ತಾರವಾಗಿ ಮಾತನಾಡಬಹುದು.

**ಮಂಜೀರಕ**—ಅವಶ್ಯಕವಾಗಿ ಅಗಬಹುದು. (ಇಬ್ಬರೂ ಯೌವನಸ್ಥನ ಕೊಟ್ಟಡಿಗೆ ಹೋಗುವರು. )

**ಯೌವನಸ್ಥ**—ನಿನ್ನ ಹೆಸರೇನು?

**ಮಂಜೀರಕ**—ಪರಂತಪನ ಸೇವಕನಾದ ಮಂಜೀರಕನು.

**ಯೌವನಸ್ಥ**—ನಿನ್ನ ವಿಷಯುವನ್ನು ನನಗೆ ಪರಂತಪನು ಹೇಳಿದ್ದನು. ನೀನು ಬಹಳ ಸಾಹಸಿ. ಇಂಥ ಭೃತ್ಯರುಳ್ಳವನಿಗೆ, ವಿಪತ್ತುಗಳು ಬಂದಾಗ್ಯೂ ದೈವಯೋಗದಿಂದ ಪರಿಹಾರವಾಗಬಹುದು.

**ಮಂಜೀರಕ**—ಅದು ಹಾಗಿರಲಿ: ಪರಂತಪನ ಪೂರ್ವೋತ್ತರಗಳೇನಾದರೂ ತಿಳಿದಿದ್ದರೆ ಹೇಳು.

**ಯೌವವಸ್ಥ**—ಪರಂತಪನು ಸ್ವರ್ಗಸ್ಥನಾಗಿರಬಹುದು.

**ಮಂಜೀರಕ**—ಈ ಮಾತನ್ನು ನಾನು ನಂಬುವುದಿಲ್ಲ. ಚಿಂತೆಯಿಲ್ಲ, ನಿನ್ನ ಹೆಸರೇನು?

**ಯೌವವಸ್ಥ**—ಕಲಾವತಿ.

**ಮಂಜೀರಕ**—ಓಹೋ! ಪುರುಷವೇಷವನ್ನು ಧರಿಸಿರತಕ್ಕ ಹುಡುಗಿಯೋ_ನೀನು?

**ಕಲಾವತಿ**—ಅಹುದು. ಈ ವಿಷಯವನ್ನು ನೀನು ಯಾರಿಗೂ ತಿಳಿಸಕೂಡದು. ಮಹಾನೀಚನಾದ ಶತ್ರುವನ್ನು ನಾನು ಯಮಾಲಯಕ್ಕೆ ಕಳುಹಿಸುವುದಕ್ಕೋಸ್ಕರ ಈ ವೇಷವನ್ನು ಧರಿಸಿಕೊಂಡು ಬಂದಿರುವೆನು. ಈ ಶತ್ರುವನ್ನು ಈ ಭೋಜನಾಲಯದಲ್ಲಿ ನೋಡಿದೆನು. ಅವನಿಗೆ ನನ್ನ ಗುರುತು ಸಿಕ್ಕಲಿಲ್ಲ.

**ಮಂಜೀರಕ**—ಈ ಶತ್ರು ಯಾರು?

**ಯೌವವಸ್ಥ**—ಮಹಾನುಭಾವನಾದ ಪರಂತಪನ ಮರಣಕ್ಕೆ ಯಾವನು ಕಾರಣಭೂತನಾಗಿರಬಹುದೋ, ಆ ದುರಾತ್ಮನಾದ ಶಂಬರನೇ ನನಗೂ ಶತ್ರುವಾಗಿರುವನು. ನನ್ನ ಸಹೋದರಿಯಾದ ಕಾಮಮೋಹಿನಿಯನ್ನು ವಿವಾಹಮಾಡಿಕೊಳ್ಳಬೇಕೆಂದು, ಪರಂತಪನೂ ಇವನೂ ಇಬ್ಬರೂ ಅನುರಕ್ತರಾದರು. ಕಾಮಮೋಹಿನಿಯು ಈ ದುರಾತ್ಮನನ್ನು ತಿರಸ್ಕರಿಸಿ ಪರಂತಪನನ್ನು ವರಿಸಿದಳು. ಈ ದ್ವೇಷದಿಂದ ಶಂಬರನು ಪರಂತಪನನ್ನು ಕೊಂದಿರಬಹುದು; ಅಥವಾ ರತ್ನಾಕರದ ಕಾರಾಗೃಹದಲ್ಲಿಟ್ಟುಕೊಂಡಿರಬಹುದು. ಕಾಮಮೋಹಿನಿಯನ್ನು ಕೂಡ ಈ ದುರಾತ್ಮನು ಬಲಾತ್ಕಾರದಿಂದ ಅಪಹರಿಸಿಕೊಂಡು ಹೋಗಿರುವಂತೆ ತೋರುತ್ತದೆ. ಕಳೆದವಾರ ಎರಡುಮೂರು ವೇಳೆ ಪರಂತಪನು ರತ್ನಾಕರಕ್ಕೆ ಹೋಗಿದ್ದನು. ಈಚೆಗೆ ಪರಂತಪನ ಪೂರ್ವಾಪರಗಳನ್ನು ವಿಚಾರಿಸುವುದಕ್ಕೋಸ್ಕರ ರತ್ನಾಕರಕ್ಕೆ ದೂತರನ್ನು ಕಳುಹಿಸಿದ್ದೆನು. ಶಂಬರನು ಯಾರಿಗೂ ಅವಕಾಶವಿಲ್ಲದಂತೆ ಎಲ್ಲಾ ಕಡೆಗಳಲ್ಲಿಯೂ ಪಹರೆಯನ್ನಿಟ್ಟಿರುವನು. ರತ್ನಾಕರವು ಈಗ ದುಷ್ಪ್ರವೇಶವಾಗಿರುವುದು.

**ಮಂಜೀರಕ**—ಪರಂತಪನೂ ಕಾಮಮೋಹಿನಿಯೂ ರತ್ನಾಕರದಲ್ಲಿರುವುದು ನಿಜವಾದಪಕ್ಷದಲ್ಲಿ, ಯಮನೇ ಬಂದು ಅಲ್ಲಿ ಕಾವಲಾಗಿದ್ದಾಗ್ಗೂ

ಅವನನ್ನು ಜಯಿಸಿ ಶಂಬರನನ್ನು ವಧಿಸಿ ನನ್ನ ಯಜಮಾನನನ್ನು ಕರೆದುಕೊಂಡು ಬರುವೆನು. ಈ ಪ್ರತಿಜ್ಞೆಗೆ ತಪ್ಪಿದರೆ, ನಾನು ಪರಂತಪನ ಭೃತ್ಯನಾಗುವುದಕ್ಕೆ ಅರ್ಹನಲ್ಲವೆಂದು ತಿಳಿದುಕೋ.

**ಕಲಾವತಿ**—ಈ ವಿಷಯದಲ್ಲಿ ನಿನಗೆ ನಾನು ಸಹಾಯಮಾಡುವೆನು. ಶಂಬರನು ಜೀವಂತನಾಗಿರುವವರೆಗೂ, ನಾನು ಆಹಾರವನ್ನೂ ವಿಶ್ರಾಂತಿಯನ್ನೂ ಹೊಂದುವುದಿಲ್ಲ. ಆದರೆ, ಶಂಬರನ ಕಾವಲುಗಾರರು ಬಹಳ ಸಮರ್ಥರು. ರತ್ನಾಕರದ ಬಂಗಲೆಯು ದಿಗ್ಭ್ರಮೆಯನ್ನುಂಟುಮಾಡತಕ್ಕ ಚಕ್ರಬಿಂಬನ ಕೋಟೆಯಂತಿರುವುದು. ಇಂಥ ಸ್ಥಳದಲ್ಲಿ ಅವನಿರುವ ಸ್ಥಳವನ್ನು ಗೊತ್ತುಮಾಡುವುದು ಕಷ್ಟ.

**ಪುಂಜೀರಕ**—ಈ ವಿಷಯದಲ್ಲಿ ಭಯಪಡಬೇಡ. ಈ ದುರ್ಗಕ್ಕೆ ದಾರಿಯನ್ನು ತೋರಿಸು. ಪರಂತಪನನ್ನು ಪತ್ತೆಮಾಡಿ ಶಂಬರನನ್ನು ನರಕಕ್ಕೆ ಪ್ರಯಾಣಮಾಡಿಸತಕ್ಕ ಕೆಲಸವನ್ನು ನನಗೆ ಬಿಡು. ಈ ದಿನ ಬಹಳದೂರ ಪ್ರಯಾಣಮಾಡಿ ತುಂಬ ದಣಿದಿದ್ದೇನೆ. ನಡೆಯುವುದಕ್ಕೆ ಸ್ವಲ್ಪವೂ ಶಕ್ತಿಯಿಲ್ಲ. ಈ ರಾತ್ರಿ ವಿಶ್ರಮಿಸಿಕೊಂಡು, ಬೆಳಗ್ಗೆ ಪ್ರಯಾಣಮಾಡುವುದಕ್ಕೆ ಸಿದ್ಧನಾಗುತ್ತೇನೆ. ನೀನೂ ಹೊರಡುವುದಕ್ಕೆ ಸಿದ್ಧಳಾಗು. ದೇವರು, ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳನ್ನು ಮಾಡುವುದಕ್ಕೆ, ನಮ್ಮಂಥವರನ್ನಲ್ಲದೆ, ಇನ್ನಾರನ್ನುಪಯೋಗಿಸುವನು?

## ಅಧ್ಯಾಯ ೧೫

ರತ್ನಾಕರದ ವರ್ತಮಾನವು ಈಗ ಪರ್ಯಾಲೋಚನೀಯವಾದದ್ದು. ಇಲ್ಲಿ ದುರ್ಗಪ್ರಾಯವಾದ ಒಂದು ಕಟ್ಟಡವುಂಟೆಂದು ಹೇಳಿದ್ದೆವಷ್ಟೆ! ಈ ಕಟ್ಟಡವು, ಪರಿಷ್ಕೃತವಾಗಿ ಸುಣ್ಣ ಬಣ್ಣಗಳ ಕೆಲಸಗಳಿಂದ ಬಹಳ ರಮಣೀಯವಾಗಿ ಮಾಡಲ್ಪಟ್ಟಿತ್ತು. ರಾಜಯೋಗ್ಯವಾದ ಕುರ್ಚಿ, ಮಂಚ, ಸೋಫಾ, ಚಿತ್ರವಿಚಿತ್ರವಾದ ಗಾಜಿನಗಿಡ, ಕಂದೀಲು ಮೊದಲಾದುವುಗಳಿಂದ

ಅಲಂಕರಿಸಲ್ಪಟ್ಟಿತ್ತು. ನೆಲದಮೇಲೆ ಹಾಸಲ್ಪಟ್ಟಿದ್ದ ಜಂಖಾನ ಮೊದಲಾದುವುಗಳು ಬಹಳ ಮನೋಹರವಾಗಿದ್ದುವು. ಈ ಕಟ್ಟಡದ ಬಾಗಿಲಿನಲ್ಲಿ, ಆಯುಧಪಾಣಿಗಳಾದ ಇಬ್ಬರು ಭೃತ್ಯರಿದ್ದರು. ಕಟ್ಟಡದ ಒಳಗೆ ಎಲ್ಲೆಲ್ಲಿಯೂ ಬಹಳ ನಿರ್ಮಲವಾಗಿತ್ತು. ಈ ಕಟ್ಟಡದ ಒಂದು ಕೊಟ್ಟಡಿಯಲ್ಲಿ ೧೮—೧೯ ವಯಸ್ಸುಳ್ಳ ಒಬ್ಬ ಹುಡುಗಿಯಿದ್ದಳು. ಇವಳು ಬಹಳ ಸುಂದರಿಯಾಗಿದ್ದಾಗ್ಯೂ, ಆಗತಾನೆ ಖಾಹಿಲೆಯಿಂದ ಎದ್ದಂತೆಯೂ, ಅನಿರ್ವಚನೀಯವಾದ ದುಃಖವನ್ನು ಅನುಭವಿಸುತ್ತಲಿರುವಂತೆಯೂ ಕಾಣಬರುತ್ತಿದ್ದಳು. ಅವಳೇ ಕಾಮಮೋಹಿನಿ. ಆಗತಾನೆ ಅವಳಿಗೆ ದೇಹದಮೇಲೆ ಸ್ಮೃತಿ ಬಂದಿತ್ತು. ಅವಳಿಗೆ ಶೈತ್ಯೋಪಚಾರಗಳನ್ನು ಮಾಡುವುದಕ್ಕೋಸ್ಕರ, ಶಂಬರನು ದುರ್ಮತಿಯೆಂಬ ಸ್ತ್ರೀಯನ್ನು ನಿಯಮಿಸಿದ್ದನು. ಪ್ರಜ್ಞೆಬಂದ ಕೂಡಲೆ ಕಾಮಮೋಹಿನಿಯು, ಅಮ್ಮಾ ನೀನುಯಾರು? ಎಂದಳು

**ದುರ್ಮತಿ**—ನಾನು ನಿನ್ನ ದಾದಿಯು.

**ಕಾಮಮೋಹಿನಿ**—ನಿನ್ನ ಹೆಸರೇನು?

**ದುರ್ಮತಿ**—ದುರ್ಮತಿ

**ಕಾಮಮೋಹಿನಿ**—ನನ್ನ ದಾದಿಯಾಗಿರುವುದಕ್ಕೆ ನಿನ್ನನ್ನು ನಿಯಮಿಸಿದವರು ಯಾರು?

**ದುರ್ಮತಿ**—ಶಂಬರನು.

**ಕಾಮಮೋಹಿನಿ**—(ಆತ್ಮಗತ) ಓಹೋ! ಈ ಚಂಡಾಲನು ಸತ್ಯಶರ್ಮಾದಿಗಳಿಗೇನೋ ಅಪಾಯವನ್ನುಂಟುಮಾಡಿ ನನ್ನನ್ನು ಅಪಹರಿಸಿಕೊಂಡು ಬಂದಿರಬಹುದು. ಈ ಕಿರಾತನಿಗೆ ನಾನು ಅಧೀನಳಾಗಿರುವಂತೆ ತೋರುತ್ತದೆ. ಈ ಸ್ತ್ರೀಯು ಅವನಿಂದ ನಿಯಮಿಸಲ್ಪಟ್ಟಿರತಕ್ಕವಳು. ನಾನು ಶತ್ರುಗಳ ಮಧ್ಯದಲ್ಲಿರುವೆನು. ಇನ್ನು ನನಗೆ ಏನು ಗತಿ! ನನ್ನಂಥ ಅನಾಥರಿಗೆ ದೇವರೇ ಗತಿಯಲ್ಲವೆ! ಇರಲಿ. ಮನುಷ್ಯರನ್ನು ನಂಬಿ ಪ್ರಯೋಜನವಿಲ್ಲ. ನಾನು ಸತ್ಯವಂತಳಾಗಿದ್ದರೆ ಈ ನನ್ನ ಕಷ್ಟಗಳನ್ನು ದೇವರೇ ಪರಿಹರಿಸಲಿ. ಹಾಗೆ ದೇವರು ಸಹಾಯಮಾಡದಿದ್ದರೆ, ಈ ಚಂಡಾಲನ ಅಧೀನದಲ್ಲಿರುವುದಕ್ಕಿಂತ ಹೇಗಾದರೂ ಪ್ರಾಣವನ್ನು ಬಿಟ್ಟು ದೇವರ ಸನ್ನಿಧಿಯನ್ನೇ ಹೊಂದುವೆನು. ಇರಲಿ, ಇಲ್ಲಿನ ವಿದ್ಯಮಾನಗಳನ್ನು ಸರಿಯಾಗಿ ತಿಳಿದು

ಕೊಳ್ಳುವೆನು. (ಪ್ರಕಾಶ) ಎಲೈ ದುರ್ಮತಿಯೇ! ನಾನು ಇದುವರೆಗೂ ಮೈಮೇಲೆ ಪ್ರಜ್ಞೆಯಿಲ್ಲದಂತೆ ಕಾಯಿಲೆ ಇದ್ದೆನಲ್ಲವೆ?

**ದುರ್ಮತಿ**—ಹೌದಮ್ಮಾ! ನೀನು ಬಹಳ ಕಾಯಿಲೆಯಾಗಿದ್ದೆ. ನಿನಗೆ ತಿರುಗಿ ಪ್ರಜ್ಞೆ ಬರುವುದಿಲ್ಲವೆಂಬುದಾಗಿ ನಾವು ಯೋಚಿಸಿದ್ದೆವು. ದೈವಾಧೀನದಿಂದ ಬದುಕಿದೆ.

**ಕಾಮಮೋಹಿನಿ**—(ಆತ್ಮಗತ) ಯಮನಿಗೆ ಕರುಣವಿಲ್ಲವೆಂಬುದು ಈಗ ನಿಶ್ಚಯವಾಯಿತು. ಶಂಬರನ ವಶವಾಗಿರುವುದಕ್ಕಿಂತ ಮರಣವು ಉತ್ತಮವಲ್ಲವೆ? ಪಾಪಿ ವಿಧಿಯು ನನಗೆ ಈ ಅವಸ್ಥೆಯನ್ನು ತಂದನು (ಪ್ರಕಾಶ) ನಾವು ಈಗ ರತ್ನಾಕರದಲ್ಲಿರುತ್ತೇವಲ್ಲವೆ?

**ದುರ್ಮತಿ**—ಹೌದಮ್ಮಾ! ನಾವು ರತ್ನಾಕರದಲ್ಲಿರುತ್ತೇವೆ.

**ಕಾಮಮೋಹಿನಿ**—ನಾನು ಸತ್ಯಶರ್ಮನ ಮನೆಯಲ್ಲಿದ್ದೆ. ಇಲ್ಲಿಗೆ ನನ್ನನ್ನು ತಂದವರು ಯಾರು?

**ದುರ್ಮತಿ**—ಅದು ನನಗೆ ತಿಳಿಯದು ನಾನು ನಿನ್ನ ಪೋಷಣೆಗೋಸ್ಕರ ನಿಯಮಿಸಲ್ಪಟ್ಟಾಗ ನೀನು ಇಲ್ಲಿ ಇದ್ದೆ.

**ಕಾಮಮೋಹಿನಿ**—ನಾನು ಇಲ್ಲಿ ಶಂಬರನ ಬಂದೀವಾನಳಾಗಿರುವೆನು: ಅಲ್ಲವೆ?

ದುರ್ಮತಿ—ನೀನು ಬಂದೀವಾನಳಲ್ಲ: ಆದರೆ, ಯಜಮಾನನ ಆಜ್ಞೆಯಿಲ್ಲದೆ ಇಲ್ಲಿಂದ ಆಚೆಗೆ ನೀನು ಹೋಗುವುದಕ್ಕಾಗುವುದಿಲ್ಲ.

**ಕಾಮಮೋಹಿನಿ**—ನನ್ನನ್ನು ನಿರ್ಬಂಧಮಾಡತಕ್ಕ ದುರಾತ್ಮನಾದ ಯಜಮಾನನು ಯಾರು?

**ದುರ್ಮತಿ**—ಈ ವಿಷಯವನ್ನು ನಾನು ಮೊದಲೇ ವಿಜ್ಞಾಪಿಸಿದೆನು. ಈ ಕಟ್ಟಡಕ್ಕೂ ಇಲ್ಲಿರತಕ್ಕ ಸಮಸ್ತರಿಗೂ ಯಜಮಾನನಾದವನು ಶಂಬರನು.

**ಕಾಮಮೋಹಿನಿ**—ಯಜಮಾನನೆಂದು ಹೇಳಬೇಡ; ಈ ಜೈಲಿಗೆ ಅಧಿಕಾರಿಯೆಂದು ಹೇಳು. ಅದು ಹಾಗಿರಲಿ. ಆ ದುಷ್ಟನು ಎಲ್ಲಿರುವನು?

**ದುರ್ಮತಿ**—ಈಗ ಕೆಲವು ದಿವಸಗಳಿಂದ ಆತನು ಇಲ್ಲಿಗೆ ಬಂದಿಲ್ಲ. ಯಾವ ನಿಮಿಷದಲ್ಲಿ ಅಪೇಕ್ಷಿಸಿದರೂ ಹಾಜರಾಗುವನು. ಅವನು ನಿನ್ನ

ವಿಷಯದಲ್ಲಿ ಬಹಳ ದಯೆಯುಳ್ಳವನಾಗಿದ್ದಾನೆ. ನಿನ್ನ ರೋಗವು ವಾಸಿಯಾಗಿ ನೀನು ಸ್ವಲ್ಪ ಚೇತರಿಸಿಕೊಳ್ಳುವವರೆಗೂ, ಕಣ್ಣೀರು ಬಿಡುತ್ತ ನಿನ್ನ ಹಾಸುಗೆಯ ಸಮೀಪದಲ್ಲಿಯೇ ಔಷಧಪಥ್ಯಗಳನ್ನು ಕೊಡಿಸುತಿದ್ದನು. ನಿನಗೆ ಪ್ರಾಣಭಯವಿಲ್ಲವೆಂದು ತಿಳಿದಕೂಡಲೆ, ಕಾರ್ಯಾರ್ಥವಾಗಿ ಹೋಗಿ ಇರುವನು.

**ಕಾಮಮೋಹಿನಿ**—(ಆತ್ಮಗತ) ಆಹಾ! ಪಾಪಿ ವಿಧಿಯೇ! ಈ ದುರಾತ್ಮನ ಸೇವೆಗೆ ನನ್ನನ್ನು ಗುರಿಮಾಡಿದೆಯಲ್ಲಾ! ಇವನು ಮಾಡಿದ ಚಿಕಿತ್ಸೆಯಿಂದ ನನ್ನ ವ್ಯಾಧಿಯು ವಾಸಿಯಾಗಿ ಪ್ರಜ್ಞೆ ಬರುವಂತೆ ಮಾಡಿದೆಯಲ್ಲಾ! ನಿನಗೆ ಸ್ವಲ್ಪವೂ ಕರುಣವಿಲ್ಲ. ನಿನ್ನನ್ನು ಬಯ್ದು ಪ್ರಯೋಜನವೇನು? ನಾನು ಮಾಡಿರುವ ಪಾಪದ ಫಲವನ್ನೇ ನಾನು ಅನುಭವಿಸುತ್ತಲಿರುವೆನು. (ಪ್ರಕಾಶ) ಈ ದುರಾತ್ಮನು, ನಾನು ವಶಳಾಗಿ ಇವನ ಮರಾಗತಗಳನ್ನು ಮರೆತು ನನ್ನ ಪಾತಿವ್ರತ್ಯವನ್ನು ಈ ಉಪಚಾರಗಳಿಗೋಸ್ಕರ ವಿಕ್ರಯಿಸುವೆನೆಂದು ತಿಳಿದುಕೊಂಡಿರಬಹುದು. ಈ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳಿಗೆ ಕರ್ತನಾದ ದೇವರಿದ್ದರೆ,—ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳನ್ನು ಮಾಡತಕ್ಕದ್ದು ಅವನ ಬಿರುದಾಗಿದ್ದರೆ,—ಅತ್ಯುತ್ಕಟವಾದ ಪಾಪಗಳಿಗೆ ಈ ಜನ್ಮದಲ್ಲೇ ಶಿಕ್ಷೆಯಾಗುವುದೆಂಬ ಧರ್ಮಶಾಸ್ತ್ರ ವಚನವು ನಿಜವಾದದ್ದಾದರೆ,—ಈ ಶಂಬರನ ದೌರಾತ್ಮ್ಯಕ್ಕೆ ತಕ್ಕ ಫಲವು ಬಹಳ ಜಾಗ್ರತೆಯಾಗಿ ಆಗುವುದು.

**ದುರ್ಮತಿ**—ನೀನು ಬಹಳ ಕೃತಘ್ನಳು. ಶಂಬರನು ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರವನ್ನು ಬಯಸುತ್ತಲಿದ್ದೀಯೆ; ಸಾಧ್ಯವಾದರೆ ಮಾಡಲೂ ಮಾಡುವೆ. ನೀನು ಪರಂತಪನನ್ನು ಮದುವೆಮಾಡಿಕೊಳ್ಳುವುದರಲ್ಲಿ ದುಡುಕಿದೆ. ಪರಂತಪನು ಬಹಳ ದುರಾತ್ಮನು. ಮೊದಲೇ ಒಂದು ವಿವಾಹವನ್ನು ಮಾಡಿಕೊಂಡಿದ್ದು, ಅದನ್ನು ನಿನ್ನಲ್ಲಿ ಆಚ್ಛಾದಿಸಿ ವಿವಾಹವನ್ನು ಮಾಡಿಕೊಂಡು, ಮೊದಲನೆಯ ಹೆಂಡತಿಯೊಡನೆ ಈ ದೇಶವನ್ನು ಬಿಟ್ಟು ಹೊರಟುಹೋದನು. ಅವನ ದೌರಾತ್ಮ್ಯವನ್ನು ದೇವರು ಕೂಡ ಮೆಚ್ಚಲಿಲ್ಲ. ಅವನು ಇಲ್ಲಿಂದಪ್ರಯಾಣ ಮಾಡುವಾಗ, ರೈಲಿನಲ್ಲಿ ಅಪಾಯವುಂಟಾಗಿ ಅವರಿಬ್ಬರೂ ಮೃತಪಟ್ಟರು. ಅನಾಥಳಾದ ನಿನ್ನನ್ನು ಅನ್ಯಾಯ

ದೃಶವಾದ ಅನುರಾಗದಿಂದ ಕಾಪಾಡುತ್ತಲಿರುವ ಶಂಬರನ ವಿಷಯದಲ್ಲಿ ನೀನು ಈರೀತಿಯಲ್ಲಿ ನಡೆದುಕೊಳ್ಳುವುದು ಯಾವ ಧರ್ಮ?

**ಕಾಮಮೋಹಿನಿ**—(ಆತ್ಮಗತ) ಅಹಾ! ಪಾಪಿ ವಿಧಿಯೇ! ನನ್ನ ಪ್ರಾಣಕ್ಕಿಂತಲೂ ಹೆಚ್ಚಾದ ಪರಂತಪನನ್ನು ಕರೆದುಕೊಂಡೆಯಾ? ನನ್ನನ್ನು ಏತಕ್ಕೆ ಉಪೇಕ್ಷಿಸಿಬಿಟ್ಟೆ? ಪರಂತಪನು ಒಂದುವೇಳೆ ಮದುವೆಮಾಡಿಕೊಂಡು ಇದ್ದರೂ ಇರಬಹುದು. ಮೊದಲನೆಯ ಹೆಂಡತಿಯು ಸತ್ತಳೆಂದು ತಿಳಿದುಕೊಂಡು ನನ್ನನ್ನು ವಿವಾಹಮಾಡಿಕೊಂಡಿರಬಹುದು. ಅವಳು ಜೀವಂತಳಾಗಿದ್ದುದನ್ನು ನೋಡಿ ಸತ್ಯಶರ್ಮನ ಮನೆಯಲ್ಲಿದ್ದಾಗ ನನಗೆ ತಲುಪಿದ ಕಾಗದವನ್ನು ಬರೆದು ಹೊರಟುಹೋಗಿರಬಹುದು ಆತನು ಎಂದಿಗೂ ದುರಾತ್ಮನಲ್ಲ. ಸತ್ತಳೆಂದು ತಿಳಿದುಕೊಂಡಿದ್ದ ಹೆಂಡತಿಯನ್ನು ಪರಿತ್ಯಾಗಮಾಡಿ ನನ್ನಲ್ಲಿ ಅನುರಕ್ತನಾಗಿದ್ದರೆ, ಅಂಥ ತಪ್ಪನ್ನು ಅವನಮೇಲೆ ಹೊರಿಸಬಹುದು. ನನ್ನನ್ನು ಬಿಟ್ಟು ಮೊದಲನೆಯ ಹೆಂಡತಿಯ ಪಕ್ಷವಾಗಿ ಅವನು ಹೊರಟುಹೋದದ್ದು, ಅವನು ಸತ್ಯವ್ರತನೆಂದು ವ್ಯಕ್ತಮಾಡುವುದಿಲ್ಲವೆ? ಅಂಥ ಮಹಾತ್ಮನನ್ನು ದುರಾತ್ಮನೆಂದು ಹೇಳತಕ್ಕ ಈ ದುರ್ಮತಿಯು ಚಂಡಾಲಿಯಲ್ಲವೆ? (ಪ್ರಕಾಶ) ಹಾಗಾದರೆ, ಪರಂತಪನು ಸತ್ತುಹೋದನೇ?

**ದುರ್ಮತಿ** - ಅವನು ಸತ್ತು ಬಹಳ ದಿವಸವಾಯಿತು. ಅವನ ಯೋಚನೆಯನ್ನು ಬಿಡು. ನಿನ್ನಲ್ಲಿ ಅನ್ಯಾದೃಶವಾದ ಅನುರಾಗವನ್ನಿಟ್ಟಿರತಕ್ಕ ಶಂಬರನನ್ನು ವರಿಸಿ ಸುಖವಾಗಿ ಬಾಳು.

**ಕಾಮಮೋಹಿನಿ**—ಎಲೌ ದುರ್ಮತಿಯೇ! ನಿನ್ನ ದುಷ್ಟವಚನಗಳು ನನ್ನ ಕಿವಿಗೆ ಶಲ್ಯಪ್ರಾಯಗಳಾಗಿವೆ. ಪರಂತಪನು ಸತ್ತಿರುವುದು ನಿಜವಾದರೆ, ನಾನು ವಿತಂತುವಾದೆನು. ನಿಜವಾದ ಪತಿವ್ರತೆಯರು ದುಷ್ಟಸ್ತ್ರೀಯರಂತೆ ಭೋಗಾಕಾಂಕ್ಷೆಯಿಂದ ಮತ್ತೊಬ್ಬ ಪತಿಯನ್ನು ವರಿಸುವುದಿಲ್ಲ. ಶಂಬರನು ನನ್ನ ಪಾತಿವ್ರತ್ಯವನ್ನು ಕೆಡಿಸಬೇಕೆಂಬ ಭಾವನೆಯನ್ನು ಇಟ್ಟುಕೊಂಡಿದ್ದರೆ, ಅಂಥ ಕೆಟ್ಟಯೋಚನೆಗೆ ತಕ್ಕ ಫಲವನ್ನು ಶೀಘ್ರದಲ್ಲಿಯೇ ಅನುಭವಿಸುವನು. ಇದಲ್ಲದೆ, ಮಹಾತ್ಮರಿಗೆ ಅಕಾಲಮರಣವು ಸಂಭವಿಸುವುದಿಲ್ಲ. ಪರಂತಪನು ಸತ್ತಿರುವನೆಂದು ನಾನು ನಂಬಲಾರೆನು. ದೈವಯೋಗದಿಂದ

ನನ್ನ ಬಿಡುಗಡೆಗೂ ಶಂಬರನನ್ನು ಶಿಕ್ಷಿಸುವುದಕ್ಕೂ ಅವನೇ ಏತಕ್ಕೆ ಕಾರಣನಾಗಕೂಡದು?

**ದುರ್ಮತಿ**—ನಿನ್ನ ಮನೋರಥವು ವ್ಯರ್ಥವಾದದ್ದು. ಪರಂತಪನು ಅವನ ದುಷ್ಕೃತ್ಯಕ್ಕೆ ಅನುರೂಪವಾದ ನರಕವನ್ನು ಹೊಂದಿರುವನು.

**ಕಾಮಮೋಹಿನಿ**—ಶಂಬರನು ಶೀಘ್ರದಲ್ಲಿಯೇ ತನ್ನ ದುಷ್ಕೃತ್ಯಗಳಿಗನುರೂಪವಾದ ನರಕವನ್ನು ಹೊಂದಿಯೇ ಹೊಂದುವನು. ಅದು ಹಾಗಿರಲಿ; ಈ ದುರಾತ್ಮನಾದ ಶಂಬರನು ಸರ್ವಪ್ರಯತ್ನದಿಂದಲೂ ನನ್ನನ್ನು ನಿನ್ನ ಸಹಾಯದಿಂದ ವಂಚಿಸಬೇಕೆಂದು ಸಂಕಲ್ಪ ಮಾಡಿರುವಂತೆ ತೋರುತ್ತದೆ. ಉದರಭರಣಕ್ಕಾಗಿ ಇಂಥ ದುಷ್ಕೃತ್ಯವನ್ನು ಮಾಡುವುದಕ್ಕೆ ನೀನು ಒಪ್ಪಿರುವೆ. ಇದು ಮಹಾ ಪಾಪಕೃತ್ಯವು. ಇದರಿಂದ ನಿನ್ನ ಜೀವನಕ್ಕೂ ಯಶಸ್ಸಿಗೂ ಕೇಡುಂಟಾಗುವುದು. ವಾಸ್ತವವಾದ ಅಂಶಗಳನ್ನು ನನಗೆ ಹೇಳು. ನಿನ್ನ ಭಕ್ತಿಗೆ ಅನುರೂಪವಾದ ಫಲವನ್ನು ದೇವರು ಕೊಡುವನು. ಪರಂತಪನು ನಿಜವಾಗಿ ಸತ್ತಿರುವನೇ? ಇದನ್ನು ನೀನು ಸಾಕ್ಷಾತ್ತಾಗಿ ನೋಡಿಬಲ್ಲೆಯಾ? ಸತ್ಯವಾಗಿ ಹೇಳು.

**ದುರ್ಮತಿ**—ನಾನು ಸಾಕ್ಷಾತ್ತಾಗಿ ಇದನ್ನು ನೋಡಿದವಳಲ್ಲ. ಆದರೆ, ಈ ವರ್ತಮಾನವು ಜನಜನಿತವಾಗಿರುವುದು. ಇದು ಸುಳ್ಳೆಂದು ನಾನು ಎಂದಿಗೂ ಹೇಳಲಾರೆನು. ಉದರಭರಣಾರ್ಥವಾಗಿ ಮಾಡಬಾರದ ಕೆಲಸಗಳನ್ನು ಮಾಡುವುದಕ್ಕೆ ನಾನು ಇಲ್ಲಿ ಬಂದಿಲ್ಲ. ನಿನ್ನ ಪೋಷಣಾರ್ಥವಾಗಿ ನಾನು ನಿಯಮಿಸಲ್ಪಟ್ಟಿರುತ್ತೇನೆ ನನ್ನ ಕೆಲಸವನ್ನು ನಾನು ವಿಶ್ವಾಸದಿಂದ ಮಾಡುತ್ತಿದ್ದೇನೋ ಇಲ್ಲವೋ ಅದನ್ನು ನೀನೇ ಬಲ್ಲೆ. ನನಗೆ ಶಂಬರನು ಇನ್ನು ಯಾವ ವಿಷಯದಲ್ಲಿಯೂ ಯಾವ ಬೋಧನೆಯನ್ನೂ ಮಾಡಿಲ್ಲ. ಇಲ್ಲದ ದೋಷವನ್ನು ನೀನು ಅವನಿಗೆ ಆರೋಪಣೆ ಮಾಡುವೆ. ಅವನು ನಿನ್ನಲ್ಲಿ ನಿಜವಾದ ವಿಶ್ವಾಸವುಳ್ಳವನು. ಪರಂತಪನ ಆಶೆಯನ್ನು ಇನ್ನು ಬಿಡು. ಪರಂತಪನನ್ನು ಅನುಸರಿಸಿ ಲೋಕಾಂತರವನ್ನು ಐದಬೇಕೆಂದು ನಿನಗೆ ಇಷ್ಟವಿದ್ದರೆ, ಮನಸ್ಸು ಬಂದಂತೆ ನಡೆದುಕೋ. ಹಾಗಿಲ್ಲದಪಕ್ಷದಲ್ಲಿ, ಶಂಬರನ ಇಷ್ಟಾರ್ಥವನ್ನು ನೆರವೇರಿಸಿ, ಈ ಪ್ರಪಂಚದ ಸುಖಸಾಮ್ರಾಜ್ಯವನ್ನು ಚೆನ್ನಾಗಿ ಅನುಭವಿಸು. ನಿನ್ನ ಕಷ್ಟಸುಖಗಳು ನಿನ್ನ ಹಸ್ತಗತವಾಗಿ

ರುವುವು. ನೀನು ಕೃತಘ್ನಳೆಂದು ನಾನು ಮೊದಲೇ ಹೇಳಿದ್ದೆನಷ್ಟೆ! ಶಂಬರನು ನಿನಗೆ ಮಾಡಿರತಕ್ಕ ಒಂದು ಮಹೋಪಕಾರವಿರುವುದು: ಅದು ಇನ್ನೂ ನಿನಗೆ ತಿಳಿಯದು. ಅದು ತಿಳಿದಪಕ್ಷದಲ್ಲಿ, ನಿನಗೆ ಶಂಬರನಲ್ಲಿರತಕ್ಕ ದ್ವೇಷವು ಅಕೃತ್ರಿಮವಾದ ಅನುರಾಗವಾಗಿ ಪರಿಣಮಿಸುವುದು.

**ಕಾಮಮೋಹಿನಿ**—(ಆತ್ಮಗತ) ಇವಳು ಬಹಳ ದುಷ್ಟೆ; ಶಂಬರನ ಆಜ್ಞೆಗೆ ಅನುಸಾರವಾಗಿ ನಡೆದುಕೊಳ್ಳತಕ್ಕವಳು. ಇದಾವುದೋ ಒಂದು ಹೊಸ ವಿಷಯವನ್ನು ಉಪಕ್ರಮಿಸಿರುವಳು ಒಳ್ಳೆಯದು; ತಿಳಿದುಕೊಳ್ಳೋಣ. (ಪ್ರಕಾಶ) ಶಂಬರನು ನನಗೆ ಮಾಡಿರತಕ್ಕ ಅಂಥ ಮಹೋಪಕಾರವೇನು ?

**ದುರ್ಮತಿ**—ಹೇಳುವೆನು, ಕೇಳು. ಸುಮಿತ್ರನು ಸತ್ತುಹೋಗಿರತಕ್ಕ ಸಂಗತಿಯು ನಿನಗೆ ತಿಳಿದೇ ಇದೆ ಅವನು ಸತ್ತಮೇಲೆ, ಅವನು ಮಹಾಪಾಪಿಷ್ಠನೆಂದು ಕೆಲವು ಕಾಗದಪತ್ರಗಳಿಂದ ಗೊತ್ತಾಗಿದೆ. ಅವನು ಒಂದು ದಿವಸ ತನ್ನ ದ್ವೇಷಿಗಳಾದ ಮೂರುಜನಗಳನ್ನು ಖೂನಿ ಮಾಡಿದನು. ಇದನ್ನು ನೋಡಿ ನಿನ್ನ ತಂದೆ ಅಸಹ್ಯಪಟ್ಟು, ಅವನನ್ನು ಸರಕಾರಕ್ಕೆ ಒಪ್ಪಿಸಬೇಕೆಂದು ಪ್ರಯತ್ನ ಮಾಡಿದನು. ಅದಕ್ಕಾಗಿ ನಿಮ್ಮ ತಂದೆಯನ್ನು ಹಿಡಿದು ಇದೇ ಕಟ್ಟಡದಲ್ಲಿ ಸೆರೆಯಲ್ಲಿಟ್ಟನು. ಸುಮಿತ್ರನು ಕಾಲವಾದುದರಿಂದ, ನಿನ್ನ ತಂದೆಯನ್ನು ಶಂಬರನು ನಿನಗೋಸ್ಕರ ಬಿಡುಗಡೆಮಾಡಿ, ಈ ಕಟ್ಟಡದಲ್ಲಿಯೇ ಇಟ್ಟಿರುವನು.

**ಕಾಮಮೋಹಿನಿ**— ಈಗ ನನ್ನ ತಂದೆಯೆಲ್ಲಿದ್ದಾನೆ ?

**ದುರ್ಮತಿ**—ನಿನ್ನ ತಂದೆಯು ಈ ಕಟ್ಟಡದಲ್ಲಿಯೇ ಇರುತ್ತಾನೆ. ಶಂಬರನ ಆಜ್ಞೆಯಿಲ್ಲದೆ ಇಲ್ಲಿಂದ ಆಚೆಗೆ ಹೋಗುವುದಕ್ಕೆ ಮಾತ್ರ ಇವನಿಗೆ ಅವಕಾಶವಿಲ್ಲ.

**ಕಾಮಮೋಹಿನಿ**—(ಆತ್ಮಗತ) ಈಗ ಈ ದುರಾತ್ಮನಾದ ಶಂಬರನ, ತನ್ನ ಇಷ್ಟಾರ್ಥಪರಿಪೂರ್ತಿಗೆ, ನನ್ನ ತಂದೆಯು ಕೈಗೆ ಸಿಕ್ಕಿದ್ದು ಬಲವಾದ ಸಾಧಕವೆಂದು ತಿಳಿದುಕೊಂಡಿರಬಹುದು. ಪತಿವ್ರತೆಯರು, ದುಷ್ಟರು ಒಡ್ಡತಕ್ಕ ಇಂಥ ಬಲೆಗಳಿಗೆ ಎಂದಿಗೂ ಬೀಳರು. ನಮ್ಮ ತಂದೆಯೂಕೂಡ ತನಗೋಸ್ಕರ ಈ ದುರಾತ್ಮನಿಗೆ ನನ್ನ ಪಾತಿವ್ರತ್ಯ ವಿಕ್ರಯವನ್ನು ಮಾಡಬೇ

ಕೆಂದು ಎಂದಿಗೂ ಅಪೇಕ್ಷಿಸಲಾರನು. ಇರಲಿ ; ಉಳಿದ ವಿದ್ಯಮಾನಗಳನ್ನು ತಿಳಿದುಕೊಳ್ಳೋಣ. (ಪ್ರಕಾಶ) ಈ ವುಪಕಾರಕ್ಕೆ ಪ್ರತಿಯಾಗಿ ನನ್ನ ಪಾತಿವ್ರತ್ಯಭಂಗಕ್ಕೆ ನಾನು ಒಪ್ಪಬೇಕೆಂದು ಶಂಬರನಿಗೆ ತಾತ್ಪರ್ಯವಿರುವುದಲ್ಲವೆ?

**ದುರ್ಮತಿ**—ನಿನ್ನ ಗಂಡನು ಜೀವಂತನಾಗಿದ್ದರೆ, ನೀನು ಪರಪುರುಷ ಗಮನವನ್ನು ಮಾಡುವುದು ವ್ಯಭಿಚಾರವೆನ್ನಿಸಿಕೊಳ್ಳುವುದು. ನಿನ್ನ ಗಂಡನು ಸ್ವರ್ಗಸ್ಥನಾಗಿರುವನು. ನೀನು ಅನ್ಯನಾದ ಪತಿಯನ್ನು ವರಿಸುವುದಕ್ಕೆ ಪ್ರತಿಬಂಧಕವಾವುದೂ ಇರುವುದಿಲ್ಲ. ಇದು ಎಂದಿಗೂ ದೇಹವಿಕ್ರಯ ವಲ್ಲ. ಶಂಬರನು ನಿನಗೆ ಇಂಥ ಮಹೋಪಕಾರವನ್ನು ಮಾಡಿರುವುದಲ್ಲದೆ, ನಿನ್ನಲ್ಲಿ ಅತ್ಯಂತ ಅನುರಕ್ತನಾಗಿರುತ್ತಾನೆ. ಇವನ ಇಷ್ಟಾರ್ಥವನ್ನು ನೆರವೇರಿಸಿ ಪ್ರತ್ಯಕ್ಷವಾದ ಐಹಿಕ ಸುಖಗಳನ್ನು ಅನುಭವಿಸದೆ, ಬುದ್ಧಿಹೀನಳಂತೆ ಈ ಲೋಕವನ್ನೇ ಪರಿತ್ಯಾಗ ಮಾಡಿ ಅಪ್ರತ್ಯಕ್ಷವಾದ ಆಮುಷ್ಮಿಕ ಸುಖವನ್ನು ಅಪೇಕ್ಷಿಸುವುದು ಯುಕ್ತಾಯುಕ್ತವಾದುದೆ? ನೀನು ಚೆನ್ನಾಗಿ ಪರ್ಯಾಲೋಚಿಸು.

**ಕಾಮಮೋಹಿನಿ**—ನಿನ್ನ ಉಪದೇಶವು ಸ್ವೈರಿಣಿಯರಲ್ಲಿ ಪ್ರಯೋಜನಕಾರಿಯಾಗಬಹುದು. ಅದು ಹಾಗಿರಲಿ ; ನನ್ನ ತಂದೆಯು ನನ್ನನ್ನು ನೋಡಿರುವನೇ ?

**ದುರ್ಮತಿ**—ನಿನಗೆ ಪ್ರಜ್ಞೆಯಿಲ್ಲದಿದ್ದಾಗ ನಿನ್ನ ತಂದೆಯು ನಿನ್ನನ್ನು ಅನೇಕಾವೃತ್ತಿ ನೋಡಿದನು.

**ಕಾಮಮೋಹಿನಿ**—ನೀನು ಹೋಗಿ ಅವನನ್ನು ಕರೆದುಕೊಂಡು ಬಾ ; ನೋಡೋಣ.

**ದುರ್ಮತಿ**—ಶಂಬರನ ಆಜ್ಞೆಯಿಲ್ಲದೆ ನಾನು ಕರೆದುಕೊಂಡು ಬರುವುದಕ್ಕಾಗುವುದಿಲ್ಲ.

**ಕಾಮಮೋಹಿನಿ**—ನಾನು ಆಜ್ಞೆಯನ್ನು ಕೊಡುತ್ತೇನೆ ; ಹೊಗಿ ಕರೆದುಕೊಂಡು ಬಾ. ಈ ಆಜ್ಞೆಯನ್ನು ಉಲ್ಲಂಘಿಸಿದರೆ, ನಿನಗೆ ತಕ್ಕ ಶಿಕ್ಷೆಯನ್ನು ಮಾಡುವೆನು

ದುರ್ಮತಿಯು, ಕಾಮಮೋಹಿನಿಯ ಸ್ಥೈರ್ಯವನ್ನೂ ಆಕೃತಿಯನ್ನೂ ನೋಡಿ, ಅವಳ ಆಜ್ಞೆಯನ್ನು ಉಲ್ಲಂಘಿಸಿದರೆ ಆಗತಕ್ಕ ಫಲ

ವನ್ನು ತಿಳಿದುಕೊಂಡು, ಅವನನ್ನು ಕರೆದುಕೊಂಡು ಬರುವುದಕ್ಕೋಸ್ಕರ ಹೊರಟಳು.

ಕಾಮಮೋಹಿನಿಗೆ ಪಿತೃವಿಯೋಗವಾದಾಗ ಹತ್ತುವರುಷ ವಯಸ್ಸಾಗಿತ್ತು. ಆದಾಗ್ಯೂ, ಆತನ ಚಹರೆಯ ಜ್ಞಾಪಕವು ಸಂಪೂರ್ಣವಾಗಿತ್ತು. ಅವಳು ತಂದೆಯನ್ನು ನೋಡಬೇಕೆಂಬ ಕುತೂಹಲದಿಂದ ಇದ್ದಳು. ಅಷ್ಟರಲ್ಲಿಯೇ ಸುಮಾರು ಐವತ್ತು ವಯಸ್ಸುಳ್ಳ ಒಬ್ಬ ಮನುಷ್ಯನನ್ನು ದುರ್ಮತಿಯು ಕರೆದುಕೊಂಡು ಬಂದಳು. ಅವನು ಕಾರಾಗೃಹವಾಸದಿಂದಲೂ ವ್ಯಸನದಿಂದಲೂ ಕೃಶನಾಗಿದ್ದನು. ಇವನ ಮುಖದಲ್ಲಿ ಮೂಳೆಗಳು ಕಾಣುತಿದ್ದುವು. ಕಣ್ಣುಗಳು ಗುಣಿಬಿದ್ದಿದ್ದುವು. ಗಡ್ಡವೂ ತಲೆಯಕೂದಲುಗಳೂ ಬೆಳ್ಳಗಾಗಿದ್ದುವು. ಅವನು ಚಿಂದಿಬಟ್ಟೆಗಳನ್ನು ಹಾಕಿಕೊಂಡಿದ್ದನು. ಇವನ ಕೈಗೆ ಬೇಡಿ ಹಾಕಲ್ಪಟ್ಟಿತ್ತು. ಕಾಮಮೋಹಿನಿಯು, ಇವನನ್ನು ನೋಡಿದ ಕೂಡಲೇ ತನ್ನ ತಂದೆಯೆಂದು ಗೊತ್ತುಮಾಡಿಕೊಂಡು, ಮೇಲಕ್ಕೆ ಎದ್ದು ನಮಸ್ಕಾರವನ್ನು ಮಾಡಿದಳು ಇವರಿಗೆ ಪರಸ್ಪರ ದರ್ಶನವಾದಕೂಡಲೇ ಉಭಯರ ಕಣ್ಣುಗಳಿಂದಲೂ ನೀರು ಧಾರಾಸಂಪಾತವಾಗಿ ಸುರಿಯಿತು. ತಂದೆಯು ಅವಸ್ಥೆಯನ್ನು ನೋಡಿ, ಕಾಮಮೋಹಿನಿಯು ಅವನನ್ನು ಅಪ್ಪಿಕೊಂಡು, ಮಾತನಾಡುವುದಕ್ಕೂ ಶಕ್ತಿಯಿಲ್ಲದೆ ಕೆಲವು ನಿಮಿಷಗಳನ್ನು ಕಳೆದಳು. ಅವನೂ ಅನಿರ್ವಚನೀಯವಾದ ಕಷ್ಟಕ್ಕೆ ಗುರಿಯಾಗಿದ್ದಾಗ್ಯೂ, ಮಗಳನ್ನು ನೋಡಿದ ಸಂತೋಷದಿಂದ ಸ್ವಲ್ಪಹೊತ್ತು ಪರವಶನಾಗಿದ್ದನು.

**ಕಾಮಮೋಹಿನಿ**—ಅಪ್ಪಾ! ನಮಗೆ ವಿಯೋಗವಾಗಿ ಬಹಳ ಕಾಲವಾಯಿತು. ಈಗಲೂ ನಮ್ಮಿಬ್ಬರಿಗೂ ಸಮಾಗಮವಾಗಿರುವುದು ನಿಜವೋ?–ಅಥವಾ ನಾನು ಸ್ವಪ್ನಸುಖವನ್ನು ಅನುಭವಿಸುತ್ತಿರುವೆನೋ?

**ತಂದೆ**—ವತ್ಸೇ! ಕಾಮಮೋಹಿನಿ! ಇದು ಸ್ವಪ್ನವಲ್ಲ. ನಾನೇ ನಿನ್ನ ತಂದೆ; ನಿನ್ನನ್ನು ಪುನಃ ನೋಡಿ ಸಂತೋಷಪಡುವ ಲಾಭವು ಈ ಜನ್ಮದಲ್ಲಿ ಉಂಟಾಗುವುದೆಂದು ನಾನು ಭಾವಿಸಿರಲಿಲ್ಲ. ಏನೋ ಪುಣ್ಯವಿಶೇಷದಿಂದ, ದೇವರು ಈ ಭಾಗ್ಯವನ್ನು ನನಗೆ ಉಂಟುಮಾಡಿದನು. ನಿನ್ನ ತಾಯಿಯು, ನೀನು ಚಿಕ್ಕಮಗುವಾಗಿರುವಾಗಲೇ ಸ್ವರ್ಗಸ್ಥಳಾದಳು, ನನಗೂ ಅನಿರ್ವಚನೀಯವಾದ ದುಃಖಗಳು ಪ್ರಾಪ್ತವಾದುವು. ಇಂಥ ಕಷ್ಟ

ಗಳನ್ನು ಹತ್ತು ವರುಷ ಅನುಭವಿಸಿ, ನಿಮ್ಮ ತಾಯಿಯ ರೂಪಲಾವಣ್ಯ ಗಳು ನಿನ್ನಲ್ಲಿ ಪ್ರತಿಬಿಂಬಿಸಿರುವುದನ್ನು ನೋಡತಕ್ಕ ಸಂಪತ್ತನ್ನು ಹೊಂದು ವೆನೆಂದು ನಾನು ಎಣಿಸಿರಲಿಲ್ಲ. ಈಗ ನನ್ನ ಕಷ್ಟಗಳೆಲ್ಲಾ ಪರಿಹಾರವಾಗಿ ತೋರು ವುದಲ್ಲದೆ, ಏನೋ ಒಂದು ಸಂತೋಷ ವಿಶೇಷದಿಂದ ನಾನು ಪರ ವಶನಾಗಿರುವೆನು. ಆದಾಗ್ಯೂ, ನಿನಗೆ ಉಂಟಾಗಿರತಕ್ಕ ಪರಾಧೀನತೆಯು ನನಗೆ ಬಹಳ ಸಂಕಟವನ್ನುಂಟುಮಾಡುತ್ತಲಿರುವುದು. ಈ ಸುಖದುಃಖ ದ್ವಂದ್ವಗಳು, ಒಂದು ವಿಚಿತ್ರವಾದ ಮನೋವಿಕಲ್ಪವನ್ನುಂಟುಮಾಡುತ ಲಿವೆ. ಈ ನಿರ್ಬಂಧದಿಂದ ಬಿಡುಗಡೆಯಾಗದಿರುವಪಕ್ಷದಲ್ಲಿ, ನಮ್ಮಿಬ್ಬ ರಿಗೂ ಸಾವಕಾಶವಿಲ್ಲದೆ ಮರಣವುಂಟಾದರೆ-ಅದೇ ದೊಡ್ಡ ಕ್ಷೇಮವೆಂದು ಭಾವಿಸುತ್ತೇನೆ.

**ಕಾಮಮೋಹಿನಿ**—ಎಲೈ ತಂದೆಯೇ! ಕಷ್ಟಸುಖಗಳು ಶಾಶ್ವತವಲ್ಲ. ನಾವು ಅನುಭವಿಸಿರುವ ಕಷ್ಟಗಳಿಗಿಂತಲೂ ಹೆಚ್ಚಾದ ಕಷ್ಟವು ಯಾವುದೂ ಇಲ್ಲ. ಮರಣವನ್ನು ಏತಕ್ಕೆ ಬಯಸುತ್ತೀಯೆ? ಹತ್ತುವರುಷ ವಿಯೋಗಾ ನಂತರ ನಾವು ಒಬ್ಬರನ್ನೊಬ್ಬರು ನೋಡುವ ಸಂಭವವುಂಟಾದುದರಿಂದಲೇ, ನಮ್ಮ ಕಷ್ಟಗಳಿಗೆ ಅವಸಾನ ಸಮೀಪಿಸಿರುವುದೆಂದು ತೋರುವುದಿಲ್ಲವೆ? ನಮ್ಮನ್ನು ಇಂಥ ಅವಸ್ಥೆಗೆ ಗುರಿಮಾಡಿದವರಲ್ಲಿ, ಕೆಲವರು ಲೋಕಾಂತರ ವನ್ನು ಹೊಂದಿರಬಹುದು; ಮತ್ತೆ ಕೆಲವರಿಗೆ ನರಕದಲ್ಲಿ ಅನಿರ್ವಾಚನೀಯ ವಾದ ಯಾತನಾಸ್ಥಳಗಳು ಸಿದ್ಧವಾಗುತ್ತಿರಬಹುದು. ಮರಣವನ್ನು ಬಯಸಬೇಡ. ಈ ಲೋಕಸುಖವನ್ನು ಇನ್ನೂ ಕೆಲವು ವರುಷ ನಾವು ಅನುಭವಿಸಬೇಕಾಗಿರುವುದು. ಕಷ್ಟದ ಸರದಿಯು ಮುಗಿದುಹೋಯಿತು; ಸೌಖ್ಯದ ಸರದಿಯು ಬರುತ್ತಲಿದೆ. ಇದುವರೆಗೂ ಕೃಷ್ಣಪಕ್ಷದಲ್ಲಿದ್ದೆವು; ಈಗ ಶುಕ್ಲಪಕ್ಷವು ನಮ್ಮನ್ನು ಎದುರುನೋಡುತ್ತಲಿದೆ.

**ತಂದೆ**—ನನ್ನ ಪ್ರಿಯಳಾದ ಮಗುವೆ! ನಿನ್ನ ಅವಸ್ಥೆಯನ್ನು ನೀನು ಸಂಪೂರ್ಣವಾಗಿ ತಿಳಿದುಕೊಂಡಂತೆ ತೋರುವುದಿಲ್ಲ. ಈಗತಾನೆ ದೈವಾಧೀನ ದಿಂದ ರೋಗವೆಂಬ ಮೃತ್ಯುವಿನಿಂದ ನೀನು ಬಿಡುಗಡೆ ಮಾಡಲ್ಪಟ್ಟಿರುವೆ. ಆದರೆ, ಈ ಮೃತ್ಯುವು ನಿನ್ನನ್ನು ಪರಿಗ್ರಹಿಸಿದ್ದರೆ ನಾನು ವಿಶೇಷ ಸಂತಾಪ ಪಡುತ್ತಿರಲಿಲ್ಲ. ಮೃತ್ಯುವಿಗಿಂತಲೂ ಹೆಚ್ಚಾದ ಕ್ರೌರ್ಯವುಳ್ಳ ದುರಾತ್ಮನೊ

ಬ್ಬನಿಗೆ ನಾವಿಬ್ಬರೂ ಅಧೀನರಾಗಿರುವೆವು. ನಮ್ಮ ಕಷ್ಟಗಳಿಗೆ ಅವಸಾನ ವೆಲ್ಲಿಯದು ? ಶುಕ್ಲಪಕ್ಷವನ್ನು ಎದುರು ನೋಡುವ ಸಂತೋಷವು ನಮಗೆ ಎಲ್ಲಿಬರುವುದು ? ಈ ಕೃಷ್ಣಪಕ್ಷದಲ್ಲಿಯೇ ನಾವಿಬ್ಬರೂ ಲೋಕಾಂತರ ವನ್ನು ಹೊಂದುವಂತೆ ತೋರುತ್ತದೆ. ನಿನ್ನನ್ನು ನೋಡಿ ಮಾತನಾಡಿದ ಸಂತೋಷವು ನನಗೆ ಸಾಕು. ಯಮನು ನಮ್ಮಲ್ಲಿ ಕರುಣವನ್ನಿಟ್ಟು ಈ ನಮ್ಮ ದೇಹಗಳನ್ನು ಬಿಡುವಂತೆ ಮಾಡಿದರೆ ಕೃತಕೃತ್ಯರಾಗುವೆವು. ನಿನ್ನ ಸ್ಥಿತಿಯು ನನ್ನ ಸ್ಥಿತಿಗಿಂತಲೂ ಶೋಚನೀಯವಾದುದು. ನಾನು ಅನುಭವಿ ಸುತ್ತಲಿರುವ ಕಷ್ಟಗಳು, ನನ್ನ ದೇಹಕ್ಕೂ ಮನಸ್ಸಿಗೂ ವ್ಯಥೆಯನ್ನುಂಟು ಮಾಡುತ್ತಲಿರುವುವು ; ನಿನಗೆ ಉಂಟಾಗಿರತಕ್ಕ ಕಷ್ಟಗಳೋ, ನಿನ್ನ ಪಾತಿವ್ರ ತ್ಯಕ್ಕೂ ಭಂಗವನ್ನು ತರುವಂತೆ ತೋರುತ್ತವೆ. ಇಂಥ ಅವಸ್ಥೆಯು ಬರು ವುದರೊಳಗಾಗಿ ದೇವರು ನಿನ್ನ ಪ್ರಾಣವನ್ನು ಪರಿಗ್ರಹಿಸಿದರೆ, ಇದೇ ಪರಮ ಸುದಿನವೆಂದು ನಾನು ಭಾವಿಸುವೆನು

**ಕಾಮಮೋಹಿನಿ**--ತಂದೆಯೇ ! ಈ ವಿಷಯಗಳನ್ನೆಲ್ಲಾ ನಾನು ಬಲ್ಲೆನು. ದುರಾತ್ಮನಾದ ಶಂಬರನು ನನ್ನ ಪಾತಿವ್ರತ್ಯಭಂಗವನ್ನು ಮಾಡ ಬೇಕೆಂದು ಸಂಕಲ್ಪ ಮಾಡಿರುವನು. ಇದು ಸಾಮಾನ್ಯವಾದ ಸಂಕಲ್ಪವೆ ? ರಾವಣಾದಿಗಳು ಇಂಥ ದುಷ್ಟ ಸಂಕಲ್ಪವನ್ನು ಮಾಡಿ ಯಮಾಲಯವನ್ನು ಹೊಂದಲಿಲ್ಲವೆ ? ನಿನ್ನ ಮಗಳಾದ ಕಾಮಮೋಹಿನಿಯು ಪತಿವ್ರತಾಶ್ರೇಷ್ಠ ಳಲ್ಲವೆ ? ಅವಳ ಪಾತಿವ್ರತ್ಯಕ್ಕೆ ಭಂಗಬರುವ ಸಂದರ್ಭ ಬಂದರೆ, ಅವಳಿಗೆ ದೇವರ ಸಹಾಯವುಂಟಾಗಲಾರದೆ ? ಈ ವಿಷಯದಲ್ಲಿ ನೀನು ಭಯ ಪಡಬೇಡ.

**ತಂದೆ**—ನಿನ್ನ ಧೈರ್ಯವು ಅಸಾಧಾರಣವಾದುದು. ಆದರೆ, ಅದು ಆಧಾರ ರಹಿತವಾದುದೆಂದು ನನಗೆ ತೋರುವುದು. ನೀನು ದೇವರಲ್ಲಿ ಸಂಪೂರ್ಣ ಭಕ್ತಿಯನ್ನಿಟ್ಟಿರುವೆ; ದೇವರು ಮಾತ್ರ ಕಣ್ಣುಗಳನ್ನು ಮುಚ್ಚಿಕೊಂಡಿರು ವಂತೆ ತೋರುತ್ತದೆ. ಹಾಗಿಲ್ಲದ ಪಕ್ಷದಲ್ಲಿ, ಇಂಥ ಕಷ್ಟಕ್ಕೆ ಗುರಿಯಾಗ ತಕ್ಕ ಪಾತಿತ್ಯವನ್ನು ನಾವು ಏನುಮಾಡಿರುವೆವು ?

**ಕಾಮಮೋಹಿನಿ**—ಎಲೈ ತಂದೆಯೇ ! ಕಷ್ಟದಿಂದ ಪರವಶನಾಗಿ ನೀನು ಈರೀತಿಯಲ್ಲಿ ಮಾತನಾಡುವೆ. ದೇವರು ಎಂದಿಗೂ ಕಣ್ಣುಮುಚಿ

ಗೊಂಡು ಇಲ್ಲ. ನೀನೂ ನಾನೂ ಪಡುತ್ತಲಿರುವ ಕಷ್ಟಗಳು ಅವನಿಗೆ ತಿಳಿಯದೆ ಇಲ್ಲ. ಇದಕ್ಕೆ ತಕ್ಕ ಪ್ರತೀಕಾರವನ್ನು ಅವನು ಮಾಡದೆಹೋಗತಕ್ಕವನಲ್ಲ. ಈ ಶಂಬರನು ತನ್ನ ಪಾತಕಕ್ಕೆ ಅನುರೂಪವಾದ ಶಿಕ್ಷೆಯನ್ನು ಶೀಘ್ರದಲ್ಲಿಯೇ ಹೊಂದುವನು.

**ತಂದೆ**—ಎಲೈ ಮಗುವೇ! ದೇವರಲ್ಲಿ ಈ ವಿಧವಾದ ನಂಬಿಕೆಯು ಹಾಗಿರಲಿ. ಈ ದುರಾತ್ಮನಾದ ಶಂಬರನ ಇಷ್ಟಾರ್ಥಪರಿಪೂರ್ತಿಯನ್ನು ಮಾಡುವುದಕ್ಕೆ ನೀನು ಒಪ್ಪದಿದ್ದರೆ, ನನ್ನನ್ನು ಅವನು ನಿನ್ನ ಮುಂದುಗಡೆಯಲ್ಲಿಯೇ ಕೊಲ್ಲತಕ್ಕ ಸಂಕಲ್ಪವನ್ನು ಮಾಡಿಕೊಂಡಿದ್ದಾನೆ. ಇದು ಶೀಘ್ರದಲ್ಲಿಯೇ ನಡೆಯುವುದು.

**ಕಾಮಮೋಹಿನಿ**—ಎಲೈ ತಂದೆಯೇ! ಹುಟ್ಟಿದವರು ಎಂದಾದರೂ ಒಂದು ದಿವಸ ಸಾಯಲೇಬೇಕು. ಕೆಲವು ದಿವಸಗಳ ಮುಂಚೆಯೇ ಸಾಯುವುದರಿಂದ ಬಾಧಕವೇನು ? ಶಂಬರನು ಅತ್ಯುತ್ಕಟವಾದ ಪಾಪವನ್ನು ಮಾಡಲಾರಂಭಿಸಿರುವನು ಇಂಥ ಪಾಪಗಳಿಗೆ ಕೂಡಲೆ ಶಿಕ್ಷೆಯಾಗುವ ಸಂಭವವೂ ಉಂಟು. ಹಾಗಾಗದಪಕ್ಷದಲ್ಲಿ, ಈ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಭೂತನಾಗಿ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳನ್ನು ಮಾಡತಕ್ಕ ಈಶ್ವರನು ಇಲ್ಲವೆಂಬುದಾಗಿಯೇ ಗೊತ್ತಾಗುವುದು. ಅಂಥ ಈಶ್ವರನಿಲ್ಲದ ಪ್ರಪಂಚವು ನಮಗೆ ಆವಶ್ಯಕವಿಲ್ಲ. ಈ ದೇಹವನ್ನು ನಿರ್ಲಕ್ಷ್ಯವಾಗಿ ಬಿಟ್ಟು, ಈ ಕಷ್ಟಗಳನ್ನು ತಪ್ಪಿಸಿಕೊಳ್ಳೋಣ.

**ತಂದೆ**—ಪಾಪಿ ವಿಧಿಯು ನಮಗೆ ಅದಕ್ಕೂ ಅವಕಾಶವನ್ನು ಕೊಟ್ಟಿಲ್ಲ. ನೀನು ಈ ರತ್ನಾಕರಕ್ಕೆ ತರಲ್ಪಟ್ಟಮೇಲೆ, ನನ್ನ ಕಾಲುಬೇಡಿಗಳು ತೆಗೆಯಲ್ಪಟ್ಟುವು. ಕೈಬೇಡಿಗಳು ಇನ್ನೂ ಹಾಗೆಯೇ ಇವೆ. ಆತ್ಮಹತ್ಯವನ್ನು ಮಾಡಿಕೊಳ್ಳುವುದಕ್ಕೂ ಅವಕಾಶವಿಲ್ಲ. ನೀನು ಇವನ ಇಷ್ಟಾರ್ಥವನ್ನು ನಡೆಸದಿದ್ದರೆ, ಇವನು ನನ್ನನ್ನು ಕೊಲ್ಲುವುದಾಗಿ ಸಂಕಲ್ಪ ಮಾಡಿರುವನಷ್ಟೆ! ಇದು ನನ್ನ ಭಾಗ್ಯವೇ ಸರಿ. ಆದರೆ, ನನ್ನ ಅನಂತರ ನಿನ್ನ ಗತಿಯೇನಾಗುವುದೋ ಎಂಬ ಯೋಚನೆಯೊಂದು ಮಾತ್ರ ನನ್ನನ್ನು ಬಾಧಿಸುವುದು.

**ಕಾಮಮೋಹಿನಿ**—ನಿನ್ನ ಮರಣಕ್ಕನುರೂಪವಾದ ಮರಣವೇ ನನಗೂ ಬರುವುದು. ಈ ಚಂಡಾಲನ ಸಂಕಲ್ಪಕ್ಕೆ ಕಾಮಮೋಹಿನಿಯು ಒಳಪಡುವಳೇ? ಹಾಗೆ ಒಳಪಟ್ಟರೆ, ಅವಳು ನಿನ್ನ ಮಗಳಾಗಿರುವುದಕ್ಕೆ ಅರ್ಹಳೇ? ಆ ವಿಷಯದಲ್ಲಿ ನೀನು ಭಯಪಡಬೇಡ. ಈ ಕಿರಾತನು ನಿನ್ನನ್ನು ಕೊಲ್ಲುವುದಾದರೆ, ನೀನು ಮಗಳ ಯೋಚನೆಯನ್ನು ಸಂಪೂರ್ಣವಾಗಿ ಬಿಟ್ಟು ಪರಬ್ರಹ್ಮನನ್ನು ಧ್ಯಾನಿಸುತ್ತ ಈ ದುಷ್ಟಲೋಕವನ್ನು ಬಿಟ್ಟುತೆರಳು. ಕಾಮಮೋಹಿನಿಯು ಶೀಘ್ರದಲ್ಲಿಯೇ ನಿನ್ನನ್ನು ಅನುಸರಿಸಿ ಬರುವಳು.

ಅಷ್ಟರಲ್ಲಿಯೇ ಶಂಬರನು ಅಲ್ಲಿಗೆ ಬಂದನು. ಕಾಮಮೋಹಿನಿಯು ಪ್ರಸನ್ನತೆಯು ತನ್ನ ವಿಷಯದಲ್ಲಿ ಉಂಟಾಗಬೇಕೆಂದು, ಅವಳ ತಂದೆಯ ಕೈಬೇಡಿಗಳನ್ನು ತೆಗೆಸಿ, ಆತನಿಗೆ ಉಪಚಾರವನ್ನು ಮಾಡಿ, ಅವನನ್ನು ಅವನ ಬಿಡಾರಕ್ಕೆ ಕಳುಹಿಸಿ, ಅವನಮೇಲೆ ಪಹರೆಯನ್ನು ಮಾತ್ರ ಇಟ್ಟಿದ್ದನು. ಕಾಮಮೋಹಿನಿಯನ್ನು ಉಪಾಯದಿಂದ ಸ್ವಾಧೀನಮಾಡಿಕೊಳ್ಳಬೇಕೆಂದು ಪ್ರಯತ್ನಮಾಡಿ, ಅವಳೊಡನೆ ಸಲ್ಲಾಪಮಾಡಲುದ್ಯುಕ್ತನಾದನು

**ಶಂಬರ**—ಎಲೈ ಕಾಮಮೋಹಿನಿಯೇ! ನಿನ್ನ ತಂದೆಯು ಹತ್ತು ವರುಷಗಳಿಂದ ಇಲ್ಲಿನ ಕಾರಾಗೃಹದಲ್ಲಿ ಅನಿರ್ವಚನೀಯವಾದ ಸಂಕಟಗಳನ್ನು ಅನುಭವಿಸಿದನು. ಈಗ ಅವನ ಕಷ್ಟಗಳೆಲ್ಲ ನಿವಾರಣೆಯಾದುವು.

**ಕಾಮಮೋಹಿನಿ**—ಇನ್ನೂ ನಿವಾರಣೆಯಾಗಿಲ್ಲ. ನಿವಾರಣೆಯಾಗುವುದಕ್ಕೆ ಉಪಕ್ರಮವಾಗಿ ಇದೆ.

**ಶಂಬರ**—ನಿನಗೋಸ್ಕರ ಅವನ ಕಷ್ಟಗಳನ್ನು ನಾನು ಸಂಪೂರ್ಣವಾಗಿ ನಿವಾರಣೆಮಾಡುವೆನು.

**ಕಾಮಮೋಹಿನಿ**—ಅದಕ್ಕೆ ಸಂಶಯವೇನು? ಅವನನ್ನು ಕಾರಾಗೃಹಕ್ಕೆ ಹಾಕಿದ ಪಾಪಿಷ್ಠನಾದ ಸುಮಿತ್ರನು, ನಿನ್ನ ಗುಂಡಿನ ಏಟಿನಿಂದಲೇ ಸತ್ತನು. ಈಗ ನನ್ನ ತಂದೆಯ ಮನಃಕ್ಲೇಶಕ್ಕೆ ಕಾರಣಭೂತನಾದ ನೀನೂ ಕೂಡ, ನಿನ್ನ ಪ್ರವರ್ತನದಿಂದಲೇ ಹತನಾಗುವೆ. ಈ ಎರಡು ಕೆಲಸವೂ ಪೂರ

ಯಿಸಿದಕೂಡಲೆ, ನಮ್ಮ ತಂದೆಯ ಮನಃಕ್ಲೇಶಕ್ಕೆ ಅವಧಿಯು ಉಂಟಾಗಿಯೇ ಆಗುವುದು.

**ಶಂಬರ**—ಈ ನಿಷ್ಠುರೋಕ್ತಿಗಳನ್ನು ಬಿಡು. ಈಗ ನೀನು ನನ್ನ ಹಸ್ತಗತಳಾಗಿರುವೆ. ನಿನ್ನ ತಂದೆಯೂ ಹಾಗೆಯೇ ಇರುವನು. ಪರಂತಪನು ಯಮಪುರಿಗೆ ಪ್ರಯಾಣಮಾಡಿದನು. ಈ ರತ್ನಾಕರ ಮೊದಲಾದುವುಗಳೆಲ್ಲ ನನ್ನ ಸ್ವಾಧೀನವಾಗಿರುವುವು. ಕುಬೇರನ ಸಂಪತ್ತಿಗೆ ಸಮಾನವಾದ ಸಂಪತ್ತುಗಳು ನನ್ನ ಅಧೀನವಾಗಿರುವುವು. ಕಾಲಾಧೀನನಾದ ಪರಂತಪನ ಯೋಚನೆಯನ್ನು ಬಿಡು. ನನ್ನ ಇಷ್ಟಾರ್ಥಪೂರ್ತಿಯನ್ನು ಮಾಡಿದರೆ, ನಿನ್ನ ತಂದೆಯನ್ನು ಕಾರಾಗೃಹದಿಂದ ಬಿಡುಗಡೆ ಮಾಡುವುದಲ್ಲದೆ, ಈ ನನ್ನ ಸಂಪತ್ತಿಗೆಲ್ಲ ನಿನ್ನನ್ನು ಭಾಗಿನಿಯನ್ನಾಗಿ ಮಾಡುವೆನು.

**ಕಾಮಮೋಹಿನಿ**—ಎಲಾ ಕೊಲೆಪಾತಕನೇ! ಈ ದುಷ್ಟವಚನಗಳನ್ನು ಬಿಡು. ಕಾಮಮೋಹಿನಿಯು ಸ್ವೈರಿಣಿಯಲ್ಲ. ಅವಳು ಮಹಾ ಪತಿವ್ರತೆಯೆಂದು ತಿಳಿದುಕೋ. ಪಾತಿವ್ರತ್ಯಭಂಗವನ್ನು ಮಾಡಬೇಕೆಂದು ಪ್ರಯತ್ನಿಸಿದ ರಾವಣಾದಿಗಳ ಅವಸ್ಥೆಯೇನಾಯಿತು? ಪರ್ಯಾಲೋಚಿಸು. ರಾವಣನ ಸಂಪತ್ತಿಗಿಂತಲೂ, ಶಕ್ತಿಗಿಂತಲೂ, ನಿನ್ನ ಸಂಪತ್ತೂ ಶಕ್ತಿಯೂ ಹೆಚ್ಚಾಗಿರುವುವೆ? ಈ ದುಷ್ಟಸಂಕಲ್ಪವನ್ನು ನೀನು ಇಟ್ಟುಕೊಂಡರೆ, ಆವನಿಗೆ ಆದ ಗತಿಯು ನಿನಗೆ ಎಂದಿಗೂ ತಪ್ಪುವುದಿಲ್ಲ. ನನಗೆ ನಿನ್ನ ಸಂಪತ್ತುಗಳಲ್ಲಿ ಭಾಗವೂ ಬೇಡ; ನನ್ನ ತಂದೆಗೆ ಸ್ವಾತಂತ್ರ್ಯವನ್ನು ನೀನು ಕೊಡುತ್ತೀಯೆಂದು ನಾನು ನಿನ್ನ ಇಷ್ಟಾರ್ಥವನ್ನು ಸಲ್ಲಿಸತಕ್ಕವಳೂ ಅಲ್ಲ.

**ಶಂಬರ**—ಎಲೇ ಹುಚ್ಚೀ! ಶ್ರೀರಾಮನು ಬದುಕಿದ್ದುದರಿಂದ, ಅವನು ರಾವಣನನ್ನು ವಧಿಸಿ ಸೀತೆಯ ಪಾತಿವ್ರತ್ಯವನ್ನು ಉಳಿಸಿದನು. ನಿನ್ನ ಪಾತಿವ್ರತ್ಯವನ್ನು ಉಳಿಸುವುದಕ್ಕೆ ಪರಂತಪನು ಜೀವಂತನಾಗಿದ್ದಾನೆಯೋ? ನಿನ್ನ ತಂದೆಯು ನನ್ನ ಹಸ್ತಗತನಾಗಿರುವುದಿಲ್ಲವೇ? ಬಲಾತ್ಕಾರವಾಗಿ ನಾನು ಈಗಲೇ ನಿನ್ನ ಪಾತಿವ್ರತ್ಯಕ್ಕೆ ಭಂಗವನ್ನುತಂದರೆ, ನನಗೆ ಎದುರು ಯಾರು? ಮೌರ್ಖ್ಯದಿಂದ ಪೂರ್ವಾಪರಗಳನ್ನು ಯೋಚಿಸದೆ ನಡೆದುಕೊಳ್ಳಬೇಡ.

**ಕಾಮಮೋಹಿನಿ**—ಎಲಾ ದುಷ್ಟಾ ! ಇಲ್ಲಿಂದ ಆಚೆಗೆ ತೆರಳು. ಪರಂತಪನು ಕಾಲಾಧೀನನಾಗಿದ್ದಾಗ್ಯೂ, ನನ್ನ ತಂದೆಯು ನಿನ್ನ ಸೆರೆಯಲ್ಲಿ ಸಿಕ್ಕಿದ್ದಾಗ್ಯೂ, ನನ್ನನ್ನು ಕೆಡಿಸುವುದು ನಿನಗೆ ಎಂದಿಗೂ ಸಾಧ್ಯವಾದುದಲ್ಲ. ಈ ದುಷ್ಟಪ್ರಯತ್ನವನ್ನು ನೀನು ಮಾಡಿದಕೂಡಲೆ, ನೀನು ಯಮಪುರಿಗೆ ಪ್ರಯಾಣ ಮಾಡಬೇಕಾಗುವುದು. ಪರಂತಪನು ಕಾಲಾಧೀನನಾಗಿದ್ದಾಗ್ಯೂ, ನಿನ್ನ ದುಷ್ಟಪ್ರಯತ್ನಗಳೇ ನಿನ್ನನ್ನು ವಧಿಸದೆ ಇರಲಾರವು. ಎಚ್ಚರಿಕೆ ಯಾಗಿರು. ನನ್ನ ಸಾನ್ನಿಧ್ಯವನ್ನು ಬಿಟ್ಟು ಹೊರಟುಹೋಗು.

**ಶಂಬರ**—ಎಲೈ ದುಷ್ಟಳಾದ ಕಾಮಮೋಹಿನಿಯೇ! ನೀನು ಬುದ್ಧಿ ಶಾಲಿನಿಯಲ್ಲ. ನಿನ್ನ ಉನ್ಮತ್ತ ಪ್ರಲಾಪಗಳಿಗೆ ನಾನು ಹೆದರತಕ್ಕವನಲ್ಲ. ಪೂರ್ವಾಪರಗಳನ್ನು ಯೋಚಿಸಿ ಬುದ್ಧಿಶಾಲಿನಿಯಂತೆ ನಡೆದುಕೊಳ್ಳುವುದಕ್ಕೆ, ನಿನಗೆ ಈ ಒಂದುದಿನ ವಾಯಿದೆಯನ್ನು ಕೊಟ್ಟಿರುತ್ತೇನೆ. ನಾಳೆ ಬೆಳಗ್ಗೆ ಬರುತ್ತೇನೆ. ಅಷ್ಟರೊಳಗಾಗಿ ಈ ಮೌರ್ಖ್ಯವನ್ನು ಬಿಟ್ಟು ನನ್ನ ಹೆಂಡತಿ ಯಾಗಿರುವುದಕ್ಕೆ ಒಪ್ಪಿಕೊಂಡರೆ ಸರಿ; ಹಾಗಿಲ್ಲದ ಪಕ್ಷದಲ್ಲಿ, ನಿನ್ನ ಎದುರಿಗೇ ನಿನ್ನ ತಂದೆಯನ್ನು ವಧಿಸುತ್ತೇನೆ. ಅನಂತರ ನಿನ್ನ ಪಾತಿವ್ರತ್ಯಕ್ಕೆ ಭಂಗವನ್ನು ಮಾಡಿ, ತರುವಾಯ ನಿನ್ನನ್ನೂ ಯಮಪುರಿಗೆ ಕಳುಹಿಸುತ್ತೇನೆ.

ಶಂಬರನು ಹೀಗೆಂದು ಹೇಳಿ, ಆ ಕೊಟಡಿಯನ್ನು ಬಿಟ್ಟು ಹೊರ ಟನು. ಕಾಮಮೋಹಿನಿಯು ಅವನಿಗೆ ಕೇಳುವಂತೆಯೇ "ದುರಾತ್ಮರಾ ದವರು ಒಂದುವಿಧವಾಗಿ ಯೋಚಿಸಿದರೆ ದೇವರು ಮತ್ತೊಂದುವಿಧವಾಗಿ ಯೋಚಿಸಕೂಡದೇ? ಈ ಪ್ರಪಂಚದಲ್ಲಿ ದುಷ್ಟನಿಗ್ರಹ ಶಿಷ್ಟಪರಿಪಾಲನೆ ಗಳನ್ನು ದೇವರು ವಹಿಸಿರುವನೋ ಇಲ್ಲವೋ ಅದು ನಾಳೆ ಬೆಳಗ್ಗೆ ಗೊತ್ತಾ ಗುವುದು" ಎಂದು ಹೇಳಿ, ಆತ್ಮಗತವಾಗಿ "ಈಶ್ವರನು ಈ ಯಿಪ್ಪತ್ತನಾಲ್ಕು ಘಂಟೆಗಳೊಳಗಾಗಿ ಇವನಿಗೆ ಶಿಕ್ಷೆಯನ್ನು ಮಾಡದಿದ್ದರೆ, ಹೇಗಾದರೂ ನಾನು ಆತ್ಮಹತ್ಯವನ್ನಾದರೂ ಮಾಡಿಕೊಂಡು ನನ್ನ ಪಾತಿವ್ರತ್ಯಕ್ಕೆ ಭಂಗ ಬರದಂತೆ ಮಾಡಿಕೊಳ್ಳಬೇಕು" ಎಂದು ಪರ್ಯಾಲೋಚಿಸುತ್ತಿದ್ದಳು.

## ಅಧ್ಯಾಯ ೧೫.

ಶಂಬರನೂ ಅರ್ಥಪರನೂ ಪರಂತಪನನ್ನು ಕಾರಾಗೃಹದ ಒಂದು ಕೊಟ್ಟಡಿಯಲ್ಲಿ ಸೇರಿಸಿ ಹೊರಟುಹೋದರಷ್ಟೆ! ಆಗ ಪರಂತಪನು ತನ್ನಲ್ಲಿ ತಾನೇ ಹೀಗೆ ಯೋಚಿಸಿಕೊಂಡನು:—ಇದು ದುಷ್ಪ್ರವೇಶವಾದ ದುರ್ಗವು. ಇದು ಭೂತ ಪ್ರೇತ ಪಿಶಾಚಾದಿಗಳಿಂದ ವಾಸಮಾಡಲ್ಪಟ್ಟಿರುವುದೆಂದು ಸತ್ಯಶರ್ಮಾದಿಗಳು ಹೇಳುತ್ತಿದ್ದರು. ಅವರ ಮಾತು ಸುಳ್ಳೆಂದು ನಾನು ಹೇಳುತ್ತಿದ್ದೆನು. ಶಂಬರ ಮೊದಲಾದ ಭೂತಗಳಿಂದ ಈ ದುರ್ಗವು ವ್ಯಾಪ್ತವಾಗಿರುವುದು. ನಾನು ಈ ಶಂಬರನ ಕೈಗೆ ಸಿಕ್ಕಿದೆನು. ಇಲ್ಲಿಂದ ತಪ್ಪಿಸಿಕೊಂಡು ಹೋಗುವುದು ದೈವಗತಿಯಿಂದ ಸಾಧ್ಯವಾಗಬೇಕೇ ಹೊರತು, ಮನುಷ್ಯಪ್ರಯತ್ನಕ್ಕೆ ಸಾಧ್ಯವಾಗುವಂತೆ ತೋರುವುದಿಲ್ಲ. ಹೀಗೆ ಈ ಕಾರಾಗೃಹದಲ್ಲಿರುವುದಕ್ಕಿಂತಲೂ, ಇಲ್ಲಿಂದ ತಪ್ಪಿಸಿಕೊಳ್ಳುವ ಪ್ರಯತ್ನವನ್ನು ಮಾಡಿ ಆ ಪ್ರಯತ್ನದಲ್ಲಿ ಸಾಯುವುದಾದರೂ ಮೇಲು. ಅರ್ಥಪರನು ಸತ್ಯವಂತನೆಂದು ನಂಬಿದ್ದೆನು ಇವನು ಮಹಾ ದ್ರೋಹಿಯಾಗಿ ಪರಿಣಮಿಸಿದನು. ಶಂಬರನನ್ನೂ ಅರ್ಥಪರನನ್ನೂ ನಿಗ್ರಹಿಸುವುದಕ್ಕೆ ಉಪಾಯವಾವುದೂ ತೋರುವುದಿಲ್ಲ. ಇದಕ್ಕೆ ಏನುಮಾಡುವುದು ? ಇಂಥ ವಿಪತ್ಕಾಲದಲ್ಲಿ ಧೈರ್ಯವನ್ನೂ ಪೌರುಷವನ್ನೂ ಅವಲಂಬಿಸಿದವರಿಗೆ ದೈವಸಹಾಯವೂ ಉಂಟಾಗಬಹುದು. ಅಂಥ ದೈವಸಹಾಯವು ಉಂಟಾದರೂ ಆಗಲಿ; ಅಥವಾ ಪುರುಷಪ್ರಯತ್ನದಲ್ಲಿ ಈ ದೇಹವನ್ನಾದರೂ ಬಿಡುವೆನು.

ಈರೀತಿಯಲ್ಲಿ ಯೋಚಿಸುತ್ತ, ಕೈಕಾಲುಗಳಿಗೆ ಹಾಕಿದ್ದ ಬೇಡಿಯನ್ನು ಬಹು ಶ್ರಮಪಟ್ಟು ಕತ್ತರಿಸಿದನು. ಹಾಗೆಯೇ ಜೇಬಿಗೆ ಕೈಹಾಕಿ ನೋಡಲು, ಒಂದು ಗಡಿಯಾರವೂ ಒಂದು ದೀಪದಕಡ್ಡಿಪೆಟ್ಟಿಗೆಯೂ ಸಿಕ್ಕಿದುವು ಇವನನ್ನು ಕೂಡಿದ್ದ ಕೊಟ್ಟಡಿಗೆ ಸ್ವಲ್ಪವೂ ಬೆಳಕು ಬೀಳುತ್ತಿರಲಿಲ್ಲ. ದೀಪದಕಡ್ಡಿಯನ್ನು ಹಚ್ಚಿ, ಆ ಕೊಟ್ಟಡಿಯನ್ನು ಪರೀಕ್ಷಿಸಿದನು. ಅದು ಹತ್ತು ಅಡಿ ಚದರವುಳ್ಳದಾಗಿ, ಎಂಟು ಅಡಿ ಎತ್ತರವುಳ್ಳದಾಗಿ, ಒಂದು ದೊಡ್ಡ ಬಂಡೆಯಲ್ಲಿ ಕೊರೆಯಲ್ಪಟ್ಟ ಗವಿಯಾಗಿತ್ತು. ಇದರ

ಬಾಗಿಲು, ಭಾರೀ ಕಬ್ಬಿಣದ ಸಲಾಕಿಗಳಿಂದ ಮಾಡಲ್ಪಟ್ಟಿತ್ತು. ಇದಕ್ಕೆ ದೊಡ್ಡ ಬೀಗವನ್ನೂ ಹಾಕಿದ್ದರು. ಈ ಬಂಡೆಯ ಹಿಂಭಾಗದಲ್ಲಿ ಒಂದು ಕಾಲುವೆಯು ಹರಿದುಹೋಗುತಿತ್ತು. ಅದರ ನೀರು ಈ ಗುಹೆಯ ಒಂದು ಕಂಡಿಯಿಂದ ಒಳಕ್ಕೆ ಪ್ರವೇಶಿಸಿ ಮತ್ತೊಂದು ಕಂಡಿಯಿಂದ ಹೊರಕ್ಕೆ ಹೋಗುತಿತ್ತು. ಈ ಗುಹೆಯಲ್ಲಿ, ಒಂದು ಮಂಚವೂ ಅದರಮೇಲೆ ಒಂದು ಹಾಸಿಗೆಯೂ ದಿಂಬೂ ಕಂಬಳಿಗಳೂ ಹಾಕಲ್ಪಟ್ಟಿದ್ದುವು. ಇದಲ್ಲದೆ, ಒಂದು ಕುರ್ಚಿ, ಒಂದು ಮೇಜು, ಒಂದು ನೀರಿನಪಾತ್ರೆ, ಸ್ವಲ್ಪಸೌದೆ, ಒಂದು ಚಕಮಕಿ, ಇವೂ ಹಾಕಲ್ಪಟ್ಟಿದ್ದುವು ಅವನು ಈ ಸೌದೆಯನ್ನು ಉರಿಸುತ್ತ ಕೆಲವುದಿವಸಗಳವರೆಗೂ ಬೆಳಕನ್ನು ಅನುಭವಿಸಬಹುದೆಂದು ಯೋಚಿಸು ತಿದ್ದನು. ಎರಡುದಿವಸಗಳವರೆಗೂ ತನಗೆ ಆಹಾರವು ಬರಲಿಲ್ಲವಾದುದ ರಿಂದ, ಬಹಳ ನಿಶ್ಶಕ್ತನಾಗಿ, ಆಹಾರವಿಲ್ಲದೆ ತನ್ನನ್ನು ಕೊಲ್ಲುವರೆಂದು ತಿಳಿದುಕೊಂಡು, ಈ ರೀತಿಯಲ್ಲಿ ಬದುಕುವುದಕ್ಕಿಂತ ಸಾಯುವುದೇ ಮೇಲೆಂದು ಯೋಚಿಸುತ್ತಿದ್ದನು. ಮೂರನೆಯ ದಿವಸ, ಅರ್ಥಪರನು ಅಲ್ಲಿಗೆ ಬಂದು, ಸಲಾಕಿಗಳ ಮಧ್ಯದಿಂದ ಒಂದು ರೊಟ್ಟಿಯನ್ನು ಬೀಸಾಕಿ, "ಕಾಲುವೆ ಯಲ್ಲಿ ನೀರಿದೆ, ಕುಡಿಯಬಹುದು" ಎಂದು ಹೇಳಿ, ಅಲ್ಲಿ ನಿಲ್ಲದೆ ಹೊರಟು ಹೋದನು. ಹೀಗೆಯೇ ಕೆಲವುದಿವಸಗಳು ನಡೆದುವು. ಒಂದುದಿನ, ಕತ್ತಲೆಯಲ್ಲಿ ಮಂಚದಮೇಲೆ ತನ್ನ ಅವಸ್ಥೆಯನ್ನು ಕುರಿತು ಸಂತಪಿಸು ತ್ತಿರುವಾಗ, ಒಂದು ಬೆಳಕು ಕಾಣಬಂದು, ಆ ದುರ್ಗದ ಕಾವಲಗಾರನು ಸಲಾಕಿಯ ಸಂದುಗಳಿಂದ ಪರಂತಪನನ್ನು ನೋಡಿದನು. ಪರಂತಪನು ಎದ್ದು ಹಾಸಿಗೆಯಮೇಲೆ ಕುಳಿತುಕೊಂಡು, ಇವನನ್ನು ಬಹಳ ಔತ್ಸುಕ್ಯದಿಂದ ನೋಡಿದನು. ಈ ಕಾವಲಗಾರನು, ಕುಳ್ಳನಾಗಿಯೂ, ಗೂನುಳ್ಳವನಾ ಗಿಯೂ, ಮಹಾ ಪ್ರಕಾಶಮಾನವಾದ ಕಣ್ಣುಗಳುಳ್ಳವನಾಗಿಯೂ, ಮಧ್ಯ ಸ್ಥವಾದ ವಯಸ್ಸುಳ್ಳವನಾಗಿಯೂ, ಬಹಳ ಭಯಂಕರನಾಗಿಯೂ ಕಾಣ ಬಂದನು. ಇವನು, ಪರಂತಪನನ್ನು ದುರುಗುಟ್ಟಿಕೊಂಡು ನೋಡಲುಪಕ್ರ ಮಮಾಡಿದನು.

**ಪರಂತಪ**—ಅಯ್ಯಾ! ನೀನು ಯಾರು? ಇಲ್ಲಿ ಏನುಕೆಲಸವಾಗಿ ಬಂದಿರುವೆ?

**ಕಾವಲುಗಾರ—** (ಆತ್ಮಗತ) ಇವನೊಡನೆ ಮಾತನಾಡುವುದು ಸಮ ನಲ್ಲ. ಈ ಗಂಟನ್ನು ಈ ಸಲಾಕಿಗಳ ಸಂದಿನಿಂದ ಬೀಸಾಕಿ ಹೊರಟು ಹೋಗುವೆನು. (ಪ್ರಕಾಶ) ನಿನ್ನೊಡನೆ ಮಾತನಾಡುವುದಕ್ಕೆ ನಾನು ಬಂದಿಲ್ಲ. ಇದನ್ನು ತೆಗೆದುಕೊ.

ಹೀಗೆಹೇಳಿ, ಗಂಟನ್ನು ಒಳಕ್ಕೆ ಬೀಸಾಕಿ ಹೊರಟುಹೋದನು. ಕೂಡಲೇ ಪರಂತಪನು ದೀಪದಕಡ್ಡಿಯಿಂದ ಅಲ್ಲಿದ್ದ ಕಟ್ಟಿಗೆಗಳನ್ನು ಹತ್ತಿಸಿ, ಆ ಬೆಳಕಿನಲ್ಲಿ ಈ ಗಂಟನ್ನು ಬಿಚ್ಚಿದನು. ಅದರಲ್ಲಿ ಅನೇಕವಿಧ ವಾದ ಭಕ್ಷ್ಯಗಳೂ ಮೇಣದಬತ್ತಿಗಳೂ, ದೀಪದಕಡ್ಡಿ ಪೆಟ್ಟಿಗೆಗಳೂ ಇದ್ದುವು. ಆಗ ಪರಂತಪನು, ತನ್ನ ಮನಸ್ಸಿನಲ್ಲಿ "ಇವನು ಶಂಬರನಕಡೆ ಯವನು. ಈ ಭಕ್ಷ್ಯಗಳನ್ನೂ ಮೇಣದಬತ್ತಿಗಳನ್ನೂ ದೀಪದಕಡ್ಡಿ ಪೆಟ್ಟಿಗೆಗಳನ್ನೂ ಹೀಗೆ ತಂದು ಹಾಕುವುದಕ್ಕೆ ಕಾರಣವೇನು? ಶಂಬರನೇ ನಾದರೂ ವಿಷವನ್ನು ಹಾಕಿ ನಾನು ಇದನ್ನು ತಿಂದುಸಾಯಲೆಂದು ಇವನ ದ್ವಾರಾ ಈ ಭಕ್ಷ್ಯವನ್ನು ಕಳುಹಿಸಿರಬಹುದೇ? ಹಾಗಿರಲಾರದು. ನಾನು ಇವನ ಹಸ್ತಗತನಾಗಿರುತ್ತೇನೆ. ನನ್ನನ್ನು ಕೊಲ್ಲುವುದು ಇವನಿಗೆ ಏನೂ ಕಷ್ಟವಿಲ್ಲ. ಈ ರೀತಿಯಲ್ಲಿ ಪ್ರೇರಿತನಾಗಿ ಈ ಕಾವಲುಗಾರನು ಬಂದಿರ ಲಾರನು. ಈಶ್ವರಪ್ರೇರಣೆಯಿಂದ ನನಗೆ ಸಹಾಯಮಾಡಬೇಕೆಂದು ಇವನಿಗೆ ಏತಕ್ಕೆ ತೋರಿರಕೂಡದು? ಇರಲಿ, ಪರೀಕ್ಷಿಸೋಣ. ಬಹುಶಃ ಈ ಕಷ್ಟ ನಿವಾರಣೆಗೆ ಈ ಕಾವಲುಗಾರನು ನನಗೆ ಸಹಾಯಭೂತನಾಗುವನು" ಎಂದು ಯೋಚಿಸುತ್ತ ಆದಿನವನ್ನು ಕಳೆದನು. ಮಾರನೆಯದಿವಸವೂ, ಆ ಕಾವಲು ಗಾರನು ಒಳ್ಳೆಯ ಭಕ್ಷ್ಯಭೋಜ್ಯಗಳನ್ನು ಗಂಟುಕಟ್ಟಿ ಆ ಕಾರಾಗೃಹಕ್ಕೆ ತಂದು ಬೀಸಾಕಿದನು. ಅರ್ಥಪರನು ರೊಟ್ಟಿಯನ್ನು ತಂದು ಹಾಕುವುದು ನಿಂತು ಹೋಯಿತು; ಈ ಕಾವಲಗಾರನು ತರತಕ್ಕ ಆಹಾರಗಳು ಮಾತ್ರ ಕ್ರಮವಾಗಿ ಬರುವುದಕ್ಕೆ ಉಪಕ್ರಮವಾಯಿತು. ಹಸಿವಿನಿಂದ ನಾನು ಸಾಯ ಲೆಂದು ಶಂಬರನು ಅರ್ಥಪರನ ಮೂಲಕವಾಗಿ ಕಳುಹಿಸುತ್ತಿದ್ದ ರೊಟ್ಟಿ ಯನ್ನು ನಿಲ್ಲಿಸಿರಬಹುದೆಂಬುದಾಗಿಯೂ, ಹೀಗೆ ನಾನು ಸಾಯದಿರಲೆಂದು ಈ ಕಾವಲಗಾರನು ಭಕ್ಷ್ಯ ಭೋಜ್ಯಗಳನ್ನು ತಂದುಕೊಡುತ್ತಿರಬಹು ದೆಂಬುದಾಗಿಯೂ, ಪರಂತಪನು ಭಾವಿಸಿಕೊಂಡನು. ಇದು ನಿಜವಾದ

ಭಾವನೆ. ಇವನಿಗೆ ಆಹಾರವಿಲ್ಲದಂತೆಮಾಡಿ ಅವನಾಗಿ ಸಾಯುವಂತೆ ಮಾಡಬೇಕೆಂದು, ಶಂಬರನು ಕಾವಲುಗಾರನಿಗೆ ಆಜ್ಞೆಮಾಡಿದ್ದನು. ಈಕಾವಲುಗಾರನ ಮನಸ್ಸು, ಇಂಥ ಅಕೃತ್ಯವನ್ನು ಮಾಡುವುದಕ್ಕೆ ಒಪ್ಪಲಿಲ್ಲ. ಆದುದರಿಂದಲೇ, ಅವನು ಏಕಾಂತವಾಗಿ ಆಹಾರವನ್ನು ತಂದುಕೊಡುತಿದ್ದನು. ಕಾಮಮೋಹಿನಿಯೂ ಅವಳ ತಂದೆಯೂ ಕಲೆತು ಮಾತನಾಡಿದ ದಿನ ಪ್ರಾತಃಕಾಲ, ಕಾವಲುಗಾರನು ಆಹಾರಾದಿಗಳನ್ನು ಗಂಟುಕಟ್ಟಿ ಪರಂತಪನಿದ್ದ ಗುಹೆಗೆ ಹಾಕಿದನು. ಆದಾಗ್ಯೂ, ಆ ದಿನವೇ ಎರಡನೆಯ ಸಾರಿ ಲಾಂದ್ರವನ್ನು ಹಿಡಿದುಕೊಂಡು ಇವನು ಪರಂತಪನ ಬಳಿಗೆ ಬಂದನು. ಪರಂತಪನು ಇವನನ್ನು ದೃಷ್ಟಿಸಿ ನೋಡಲು, ಇವನ ಎದೆಯಲ್ಲಿ ಗಾಯವಾಗಿ ರಕ್ತವು ಸುರಿಯುತಿತ್ತು. ಇವನು ಮೂರ್ಛೆಯಿಂದ ಕೆಳಗೆ ಬೀಳುವಂತೆ ಕಾಣುತ್ತಿದ್ದನು. ಆದರೂ ಒಂದು ನಿಮಿಷದೊಳಗಾಗಿ ಆ ಕಾರಾಗೃಹದ ಬೀಗವನ್ನು ತೆಗೆದು ಒಳಗೆ ಹೋಗಿ ಪುನಃ ಹೊರಗೆ ಬೀಗವನ್ನು ಹಾಕಿದನು. ಪರಂತಪನು ಆಶ್ಚರ್ಯದಿಂದ ಇವನ ವ್ಯಾಪಾರವನ್ನೆಲ್ಲ ನೋಡುತ್ತಿದ್ದನು. ಆಗ ಕಾವಲುಗಾರನು ಕುರ್ಚಿಯನ್ನು ಎಳೆದುಕೊಂಡು ಅದರ ಮೇಲೆ ಕುಳಿತುಕೊಂಡು ಪರಂತಪನನ್ನು ದೃಷ್ಟಿಸಿನೋಡಿ 'ಅಯ್ಯಾ! ನೀನು ಪರಂತಪನೆ?' ಎಂದನು.

**ಪರಂತಪ**— ಅಹುದು.

**ಕಾವಲುಗಾರ**— ನಾನು ಈ ರತ್ನಾಕರದ ಕಾವಲಗಾರನು. ಲೋಕದಲ್ಲಿ ಎಲ್ಲರೂ ನನ್ನನ್ನು ಪಿಶಾಚನೆಂದು ತಿಳಿದುಕೊಂಡಿರುವರು. ಈಗ ನನಗೆ ಅಪಾಯಕರವಾದ ಏಟು ಬಿದ್ದಿರುವುದು. ಸ್ವಲ್ಪಹೊತ್ತಿನೊಳಗಾಗಿ ನಾನು ಸಾಯುವೆನು. ಸಾಯುವುದಕ್ಕೆ ಮುಂಚೆ ನಾನು ಹೇಳತಕ್ಕ ಕೆಲವು ಅಂಶಗಳುಂಟು.

**ಪರಂತಪ**— ಒಳ್ಳೆಯದು. ಹೇಳಬೇಕಾದುದನ್ನು ಹೇಳು. ನಿನಗೆ ತಗುಲಿರತಕ್ಕ ಏಟು ನಿಜವಾಗಿ ಅಪಾಯಕರವಾದುದೆ?

**ಕಾವಲುಗಾರ**— ಅದರಲ್ಲಿ ಏನೂ ಸಂದೇಹವಿಲ್ಲ. ಶಂಬರನ ಸಮೀಪದಲ್ಲಿದ್ದ ಕೆಲವು ಕಾಗದ ಪತ್ರಗಳನ್ನು, ಒಂದು ಧರ್ಮಕಾರ್ಯಾರ್ಥವಾಗಿ ನಾನು ಈ ರಾತ್ರಿ ಅಪಹರಿಸಿದೆನು. ಅವನು ನನ್ನನ್ನು ಗುಂಡಿನಿಂದ ಹೊಡೆ

ದನು. ಆ ಕ್ಷಣದಲ್ಲಿಯೇ, ನನಗೆ ಮಾತ್ರ ತಿಳಿದಿರತಕ್ಕ ಒಂದು ಮಾರ್ಗದಿಂದ ನಾನು ಇಲ್ಲಿಗೆ ಬಂದಿರುವೆನು. ಅವನ ಅಪರಾಧಕ್ಕೆ ಪ್ರತೀಕಾರವನ್ನು ನೀನು ಮಾಡುವುದಾದರೆ, ನಿನಗೆ ಈ ಕಾರಾಗೃಹವಾಸವನ್ನು ತಪ್ಪಿಸುವೆನು.

**ಪರಂತಪ**—ನನಗೆ ಬಿಡುಗಡೆಯಾದಮೇಲೆ ಶಂಬರನಿಗೆ ಒಂದು ದಿವಸವೂ ಆಯುಸ್ಸು ಇರುವುದಿಲ್ಲವೆಂದು ನೀನು ದೃಢನಾಗಿ ನಂಬಬಹುದು. ಈ ದುರಾತ್ಮನು ಇನ್ನೂ ಎಷ್ಟೋ ಅಕೃತ್ಯಗಳನ್ನು ಮಾಡಿರುವನು. ಅವುಗಳಿಗೆ ಪ್ರತೀಕಾರವನ್ನು ಮಾಡಿಸುವುದಕ್ಕೋಸ್ಕರ ದೇವರು ಸನ್ನದ್ಧನಾಗಿರುವನೆಂದು ತೋರುವ ಸಂದರ್ಭಗಳು ಉಂಟಾಗುತ್ತಿವೆ.

**ಕಾವಲುಗಾರ**—ಹಾಗಾದರೆ ಹೇಳುವೆನು-ಕೇಳು. ಕಳೆದ ಹತ್ತು ವರ್ಷಗಳಿಂದ ನಾನು ಸುಮಿತ್ರನ ಸೇವಕನಾಗಿದ್ದೆನು. ಅವನು ಕಾಮಮೋಹಿನಿಯ ತಂದೆಯನ್ನು ಇಲ್ಲಿ ಒಂದು ಕಾರಾಗೃಹದಲ್ಲಿಟ್ಟು, ಅವನಮೇಲೆ ನನ್ನನ್ನು ಪಹರೆಹಾಕಿದ್ದನು. ಸುಮಿತ್ರನು ನನಗೆ ತುಂಬ ಸಂಬಳವನ್ನು ಕೊಡುತ್ತಿದ್ದನು. ಈ ಸಂಬಳದಲ್ಲಿ ಒಂದು ಭಾಗವನ್ನು ಈ ಖೈದಿಯ ಪೋಷಣೆಗಾಗಿ ನಾನು ವಿನಿಯೋಗಿಸುತ್ತಿದ್ದೆನು. ಅವನನ್ನು ಎಷ್ಟು ದಯೆಯಿಂದ ನಾನು ಕಾಣುತ್ತಿದ್ದೆನೋ ಅದು ನಿನಗೆ ಅವನಿಂದಲೇ ತಿಳಿಯುವುದು.

**ಪರಂತಪ**—ಅವನನ್ನು ನಾನು ಬಲ್ಲೆನೋ?

**ಕಾವಲಗಾರ**—ನೀನು ಅವನನ್ನು ನೋಡಿಲ್ಲ.

**ಪರಂತಪ**—ಅವನು ಎಲ್ಲಿ ಇದ್ದಾನೆ?

**ಕಾವಲಗಾರ**—ಅವನಿಗೆ ಕೈಕಾಲುಬೇಡಿಗಳನ್ನು ಹಾಕಿ, ಇಂತಹುದೇ ಒಂದು ಗುಹೆಯಲ್ಲಿ ಸುಮಿತ್ರನು ಅವನನ್ನು ಇಟ್ಟಿದ್ದನು. ಸುಮಿತ್ರನು ಸತ್ತಮೇಲೆ, ಶಂಬರನು ಅವನ ಬಂಧವಿಮೋಚನೆಯನ್ನು ಮಾಡಿ, ಅವನ ಸಹಾಯದಿಂದ ಕಾಮಮೋಹಿನಿಯನ್ನು ಪಾಣಿಗ್ರಹಣ ಮಾಡಿಕೊಳ್ಳಬೇಕೆಂದು ಇದ್ದಾನೆ.

**ಪರಂತಪ**—ಏನು ಹೇಳಿದೆ? ಈ ಪಾಪಿಯನ್ನು ಅವಳು ಮದುವೆಮಾಡಿಕೊಳ್ಳುವಳೇ? ಎಂದಿಗೂ **ಮಾಡಿಕೊಳ್ಳಲಾರಳು.**

**ಕಾವಲುಗಾರ**— ನೀನು ಹೇಳುವುದು ನಿಜ. ನಾಡಿದ್ದು ಬೆಳಗ್ಗೆ ಎಂಟು ಘಂಟೆಯೊಳಗಾಗಿ ತನ್ನನ್ನು ಮದುವೆಮಾಡಿಕೊಳ್ಳುವಂತೆ ಮಗಳನ್ನು ಒಪ್ಪಿಸದಿದ್ದಪಕ್ಷದಲ್ಲಿ, ಪ್ರಥಮತಃ ತಂದೆಯ ಶಿರಶ್ಛೇದನವನ್ನು ಮಾಡಿ ಅನಂತರ ಕಾಮಮೋಹಿನಿಯನ್ನು ಕೆಡಿಸಿ ತರುವಾಯ ಅವಳ ಶಿರಶ್ಛೇದನ ವನ್ನೂ ಮಾಡಬೇಕೆಂದು, ಈ ದುರಾತ್ಮನು ಸಂಕಲ್ಪಮಾಡಿದ್ದಾನೆ. ಶೀಘ್ರದ ಲ್ಲಿಯೇ ನೀನು ಇವನನ್ನು ವಧಿಸದಿದ್ದರೆ, ಕಾಮಮೋಹಿನಿಗೂ ಅವಳ ತಂದೆಗೂ ಮಾನಹಾನಿ ಪ್ರಾಣಹಾನಿಗಳು ತಪ್ಪುವುದಿಲ್ಲ.

**ಪರಂತಪ** — ಈ ಗುಹೆಯಿಂದ ಆಚೆಗೆ ಹೋಗುವುದಕ್ಕೆ ಮಾರ್ಗವನ್ನು ತೋರಿಸು. ಈ ಚಂಡಾಲನಾದ ಶಂಬರನ ಶರೀರವನ್ನು, ದುಷ್ಟಮೃಗ ಗಳಿಗೂ ಪಕ್ಷಿಗಳಿಗೂ ಆಹಾರವನ್ನಾಗಿ ಮಾಡುವೆನು.

**ಕಾವಲುಗಾರ**— ಆತುರಪಡಬೇಡ. ಈ ಕಾಗದಗಳನ್ನು ತೆಗೆದುಕೊ. ಇದೇ ಮಾಧವನ ಉಯಿಲು. ಇದರಪ್ರಕಾರ, ಈ ರತ್ನಾಕರಕ್ಕೆ ನೀನು ಹಕ್ಕುದಾರನು. ಇದನ್ನು ಅರ್ಥಪರನು ರಿಜಿಸ್ಟ್ರೇಷನ್ ಆಫೀಸಿನಿಂದ ಅಪ ಹರಿಸಿಕೊಂಡು ಬಂದು ಶಂಬರನಿಗೆ ಕೊಟ್ಟು, ಪ್ರತಿಫಲವನ್ನು ನಿರೀಕ್ಷಿಸುತ್ತ ಲಿರುವನು. ಈ ಯೆರಡನೆಯ ಕಾಗದವು, ಸುಮಿತ್ರನ ಉಯಿಲು. ಇದರಲ್ಲಿ ಸುಮಿತ್ರನು ಕಲಾವತಿಯನ್ನು ಮದುವೆಮಾಡಿಕೊಂಡವರಿಗೆ ತನ್ನ ಆಸ್ತಿಯ ನ್ನೆಲ್ಲ ಕೊಡುವುದಾಗಿ ಬರೆದಿರುವನು. ಇದನ್ನೂ ಕಲಾವತಿಯಿಂದ ಈ ದುರಾತ್ಮನು ಅಪಹರಿಸಿದನು. ಇದನ್ನು ಅಪಹರಿಸಿ ಇದಕ್ಕೆ ಹಕ್ಕುದಾರ ಳಾದ ಕಲಾವತಿಗೆ ಕೊಡಬೇಕೆಂದು ನಾನು ಪ್ರಯತ್ನಮಾಡಿದೆನು. ಇದನ್ನು ನೋಡಿ, ಶಂಬರನು ನನ್ನನ್ನು ಗುಂಡಿನಿಂದ ಹೊಡೆದನು. ಇನ್ನು ವಿಶೇಷ ಮಾತನಾಡುವುದಕ್ಕೆ ನನಗೆ ಶಕ್ತಿಯಿಲ್ಲ. ಈ ದುರ್ಗವನ್ನು ಬಿಟ್ಟು ಆಚೆಗೆ ಹೋಗುವುದಕ್ಕೆ ನಿನಗೆ ದಾರಿಯನ್ನು ತೋರಿಸಿ, ಅನಂತರ ಹಿಂದಿರುಗಿ ಬಂದು ನಾನು ಈ ದೇಹವನ್ನು ಬಿಡುವೆನು. ಈ ಶಂಬರನ ಕಡೆಯ ಐದುಜನ ಕಾವಲುಗಾರರು ಈ ರತ್ನಾಕರದಲ್ಲಿರುವರು. ಅವರು ಬಹಳ ದುಷ್ಟರು. ಪಾಪಕೃತ್ಯಗಳನ್ನು ಮಾಡುವುದರಲ್ಲಿ ಅವರು ಶಂಬರನಿಗೆ ಸಮಾನರಾದ ವರು. ಶತ್ರುನಿಗ್ರಹವನ್ನು ಮಾಡುವುದರಲ್ಲಿ ನೀನು ಬಹಳ ಜಾಗರೂಕನಾ ಗಿರಬೇಕು. ಹಾಗಿಲ್ಲದ ಪಕ್ಷದಲ್ಲಿ ನಿನ್ನ ಪ್ರಾಣಕ್ಕೆ ಅಪಾಯ ಬರುವುದು.

ಹೀಗೆ ಹೇಳಿ, ಏಕಾಂತವಾದ ಒಂದು ಸುರಂಗದ ಮಾರ್ಗದಿಂದ ಅವನನ್ನು ಸ್ವಲ್ಪದೂರ ಕರೆದುಕೊಂಡು ಹೋಗಿ, ಅಲ್ಲಿದ್ದ ಒಂದು ಕೀಲಿನ ಬಾಗಿಲಿನ ಗುಂಡಿಯನ್ನು ಮುಟ್ಟಿದನು. ಕೂಡಲೆ ಬಾಗಿಲು ತೆಗೆದುಕೊಂಡಿತು. ಆ ಬಾಗಿಲನ್ನು ಹಾಕುವುದಕ್ಕೆ ಸಾಧಕವಾದ ಮತ್ತೊಂದು ಕೀಲನ್ನು ಅವನಿಗೆ ತೋರಿಸಿ, ಆ ಸುರಂಗಮಾರ್ಗದ ಏಕಾಂತಗಳನ್ನೆಲ್ಲ ಅವನಿಗೆ ಹೇಳಿ, ಕಾವಲುಗಾರನು ಕಳುಹಿಸಿಕೊಟ್ಟನು.

## ಅಧ್ಯಾಯ. ೧೬.

ಪರಂತಪನು ರತ್ನಾಕರವನ್ನು ಬಿಟ್ಟು ಕಲ್ಯಾಣಪುರಕ್ಕೆ ವೇಷಧಾರಿಯಾಗಿ ಹೋದನು. ಆ ಪಟ್ಟಣದ ಕಲ್ಪತರುವೆಂಬ ಭೋಜನಶಾಲೆಯನ್ನು ಪ್ರವೇಶಿಸಿ, ಏಕಾಂತವಾಗಿ ಸಮರಸಿಂಹನಬಳಿಗೆ ಹೋಗಿ, ನಡೆದ ವಿದ್ಯಮಾನಗಳನ್ನೆಲ್ಲ ಹೇಳಿದನು.

**ಸಮರಸಿಂಹ**—ದುರಾತ್ಮನಾದ ಪಂಜರನನ್ನು ಶಿಕ್ಷಿಸಿ ನಿನ್ನ ಹೆಂಡತಿ ಮಾವ ಮೊದಲಾದವರನ್ನು ಬಿಡುಗಡೆ ಮಾಡುವುದಕ್ಕೆ ನನ್ನ ಸಹಾಯವನ್ನು ಅಪೇಕ್ಷಿಸುತ್ತೀಯಲ್ಲವೆ ?

**ಪರಂತಪ**—ಅದಕ್ಕೆ ಸಂದೇಹವೇನಿದೆ ? ನಿನ್ನ ಸಹಾಯವಿಲ್ಲದಿದ್ದರೆ ಈ ಕೆಲಸ ನಡೆಯುವುದಿಲ್ಲ.

**ಸಮರಸಿಂಹ**—ಈ ದುಷ್ಟನನ್ನು ನಿಗ್ರಹಿಸುವುದಕ್ಕೋಸ್ಕರ ನಾನು ಪ್ರಾಣವನ್ನಾದರೂ ಕೊಡುವೆನು.

**ಪರಂತಪ**—ಹಾಗಾದರೆ ನನ್ನ ಕೆಲಸವಾಯಿತೆಂದು ಭಾವಿಸಿರುವೆನು. ಅದು ಹಾಗಿರಲಿ; ಈ ಪಟ್ಟಣಕ್ಕೆ ಮ್ಯಾಜಿಸ್ಟ್ರೇಟರು ಯಾರು ?

**ಸಮರಸಿಂಹ**—ನಾನೇ ಇಲ್ಲಿಗೆ ಮ್ಯಾಜಿಸ್ಟ್ರೇಟಾಗಿ ಇರುವೆನು ?

**ಪರಂತಪ**—ಹಾಗಾದರೆ, ಬಲಿಷ್ಠರಾಗಿಯೂ, ಯುದ್ಧಮಾಡುವುದರಲ್ಲಿ ಸಮರ್ಥರಾಗಿಯೂ ಇರತಕ್ಕ ಪೊಲೀಸಿನವರನ್ನು ಕರದುಕೊಂಡು ಹೊರಡು.

ಒಂದು ಏಕಾಂತವಾದ ಮಾರ್ಗದಿಂದ ನಿಮ್ಮನ್ನು ರತ್ನಾಕರದ ಒಳಕ್ಕೆ ಕರೆದುಕೊಂಡು ಹೋಗುವೆನು. ಅಲ್ಲಿಗೆ ಹೋದಮೇಲೆ ಸಮಯವನ್ನು ನೋಡಿ ನಾನು ಒಂದು ಗುರುತನ್ನು ಮಾಡುವೆನು ಆಗ ಇವರು ಶಂಬರ ನನ್ನು ದಸ್ತಗಿರಿಮಾಡಲಿ.

**ಸಮರಸಿಂಹ**—ಸರಿ, ಆಗಬಹುದು. ಸಮಯಕ್ಕೆ ಸರಿಯಾಗಿ ನಿನ್ನ ಭೃತ್ಯನು ಬರುತ್ತಾನೆ, ನೋಡು. ಇದು ನಿನಗೆ ಶುಭಸೂಚನೆಯಲ್ಲವೆ ?

**ಪರಂತಪ**—ಓಹೋ ! ಮಂಜೀರಕನು ಬರುವನು ! ಸಹಸ್ರಜನ ಪೊಲೀಸಿನವರ ಸಹಾಯವು ಸಿಕ್ಕಿದಂತಾಯಿತು. ಶಂಬರನನ್ನು ಗಲಾಟೆ ಯಿಲ್ಲದೆ ದಸ್ತಗಿರಿ ಮಾಡುವುದು ಇನ್ನು ಬಹಳ ಸುಲಭ, ನಾನು ಇಲ್ಲಿರು ವೆನೆಂದು ಅವನಿಗೆ ಹೇಳಬೇಡ. ನನ್ನ ವಿಷಯದಲ್ಲಿ ಏನು ವರ್ತಮಾನವನ್ನು ತಂದಿರುವನೋ-ಅದನ್ನು ಕೇಳು.

**ಸಮರಸಿಂಹ**—ಹಾಗೆಯೇ ಮಾಡುವೆನು.

ಮಂಜೀರಕನು ಸಮರಸಿಂಹನ ಬಳಿಗೆ ಬಂದು ನಮಸ್ಕಾರವನ್ನು ಮಾಡಿದನು.

**ಸಮರಸಿಂಹ**—ಎಲೈ ಮಂಜೀರಕನೆ ! ನೀನು ನನ್ನ ಅಪ್ಪಣೆಯನ್ನು ತೆಗೆದುಕೊಂಡು ಹೋಗಿ ಬಹಳ ದಿವಸವಾಯಿತು. ಪರಂತಪನ ವಿಚಾರವೇನು?

**ಮಂಜೀರಕ**—ಪರಂತಪನ ವಿಚಾರವನ್ನು ಸಮಗ್ರವಾಗಿ ತಿಳಿದುಕೊ ಳ್ಳುವಂತೆ ಬಹಳ ವ್ಯವಸಾಯ ಮಾಡಬೇಕಾಯಿತು. ಆತನು ರತ್ನಾಕರ ವಲ್ಲಿ ಕಾಡುಮೃಗದಂತೆ ಒಂದು ಬೋನಿನಲ್ಲಿ ಕೂಡಲ್ಪಟ್ಟಿರುವನು.

**ಸಮರಸಿಂಹ**—ಕಾಮಮೋಹಿನಿಯ ವೃತ್ತಾಂತವೇನು ?

**ಮಂಜೀರಕ**—ಶಂಬರನು ಸತ್ಯವರ್ಮನ ಮನೆಯಿಂದ ಅವಳನ್ನು ಬಲಾ ತ್ಕಾರವಾಗಿ ತೆಗೆದುಕೊಂಡು ಹೋಗಿ ರತ್ನಾಕರದಲ್ಲಿ ಇಟ್ಟುಕೊಂಡಿರುವನು.

**ಸಮರಸಿಂಹ**—ಇದಕ್ಕೆ ರುಜುವಾತು ಏನಾದರೂ ಉಂಟೋ ?

**ಮಂಜೀರಕ**—ಸಂಪೂರ್ಣವಾದರುಜುವಾತು ಸಂಪಾದಿಸಲ್ಪಟ್ಟಿರುವುದು.

**ಸಮರಸಿಂಹ**—ಶಂಬರನು ಈಗ ಎಲ್ಲಿರುವನು ?

**ಮಂಜೀರಕ**—ಈ ಕಲ್ಯಾಣಪುರದಲ್ಲಿ ಅವನು ಇಲ್ಲ. ಬಹುಶಃ ರತ್ನಾಕರದಲ್ಲಿರಬಹುದು.

**ಸಮರಸಿಂಹ**—ಒಳ್ಳೆಯದು ; ಈ ಪ್ರಸ್ತಾವವನ್ನು ಏಕಾಂತವಾಗಿ ಇಟ್ಟುಕೊ. ಭೋಜನವನ್ನು ತೀರಿಸಿಕೊಂಡು ಬಂದು ಪುನಃನನ್ನನ್ನುಕಾಣು.

ಮಂಜೀರಕನು ಹೊರಟುಹೋದನು.

**ಸಮರಸಿಂಹ**—ಅಯ್ಯಾ! ಪರಂತಪ! ಈಗ ಮಾಡತಕ್ಕ ಕೆಲಸವೇನು?

**ಪರಂತಪ**—ಮಂಜೀರಕನ ಜತೆಗೆ ಸಹಾಯಾರ್ಥವಾಗಿ ನೀನು ಎಷ್ಟು ಜನಗಳನ್ನು ಕರೆದುಕೊಂಡು ಬರುವೆ ?

**ಸಮರಸಿಂಹ**—ನಿನಗೆ ಎಷ್ಟು ಜನಗಳು ಬೇಕು ?

**ಪರಂತಪ**—ಎಂಟು ಜನಗಳಾದರೆ ಸಾಕು.

**ಸಮರಸಿಂಹ**—ಆಗಬಹುದು; ಪ್ರಥಮತಃ ಎಂಟುಜನಗಳು ಹೋಗಲಿ. ಶೀಘ್ರದಲ್ಲಿಯೇ ನೂರುಜನ ಪೊಲೀಸ್‌ನವರು ಅವರ ಹಿಂದೆ ಬರುವಂತೆ ಆಜ್ಞೆಮಾಡುತ್ತೇನೆ.

**ಪರಂತಪ**—ಅಷ್ಟು ಜನಗಳು ಏತಕ್ಕೆ ? ಅದು ಗಲಾಟೆಗೆ ಕಾರಣ ವಾಗುವುದು. ಶಂಬರನು ಭಯಪಟ್ಟು ತನ್ನ ಅಧೀನದಲ್ಲಿರತಕ್ಕ ಕಾಮ ಮೋಹಿನಿ ಮೊದಲಾದವರನ್ನು ಕೊಲ್ಲುವುದಕ್ಕೆ ಇದು ಕಾರಣವಾದರೂ ಆಗಬಹುದು.

**ಸಮರಸಿಂಹ**—ನೀವೆಲ್ಲರೂ ಅಲ್ಲಿಗೆ ಹೋಗುವುದಕ್ಕೆ ಪೂರ್ವಭಾವಿ ಯಾಗಿಯೇ, ನಾನು ವೇಷಧಾರಿಯಾಗಿ ರತ್ನಾಕರವನ್ನು ಪ್ರವೇಶಿಸಿ, ಅಲ್ಲಿನ ವಿದ್ಯಮಾನಗಳನ್ನು ತಿಳಿದುಕೊಳ್ಳುವೆನು.

**ಪರಂತಪ**—ಇದು ಅಸಾಧ್ಯ.

**ಸಮರಸಿಂಹ**—ಸಾಧ್ಯಾಸಾಧ್ಯಗಳನ್ನು ನೀನೇ ನೋಡುವೆ. ಈ ಮಂಜೀರಕನನ್ನೂ ಬೇದರಸಿನಲ್ಲಿರತಕ್ಕ ಈ ಯೆಂಟುಜನ ಯೋಧರನ್ನೂ ಕರೆದುಕೊಂಡು, ನೀನು ರತ್ನಾಕರವನ್ನು ಪ್ರವೇಶಿಸು. ಶಂಬರನ ಸಮೀಪ ದಲ್ಲಿ ನನ್ನನ್ನು ನೀನು ಕಾಣುವೆ.

'ಒಳ್ಳೆಯದು' ಎಂದು ಸಮರಸಿಂಹನ ಅಪ್ಪಣೆಯನ್ನು ತೆಗೆದು ಕೊಂಡು, ಮಂಜೀರಕಾದಿಗಳೊಡನೆ ವೇಷಧಾರಿಯಾಗಿ ಪರಂತಪನು ಹೊರಟು, ಕಾಡುಮಾರ್ಗವಾಗಿ ರತ್ನಾಕರದ ಬಳಿಗೆ ಹೋಗಿ, ಏಕಾಂತ ವಾದ ದ್ವಾರದಿಂದ ಅದನ್ನು ಪ್ರವೇಶಿಸಿ, ತನ್ನನ್ನು ಕೂಡಿದ್ದ ಗುಹೆಯಬಳಿಗೆ

ಹೋದನು. ಅಲ್ಲಿ ಶಂಬರನ ಗುಂಡಿನ ಏಟನ್ನು ತಿಂದು ಅವನಿಗೆ ಪ್ರತೀಕಾರ ಮಾಡುವುದಕ್ಕೋಸ್ಕರ ಪರಂತಪನ ಬಂಧಮೋಕ್ಷವನ್ನು ಮಾಡಿದ ರತ್ನಾಕರದ ಕಾವಲುಗಾರನು, ಇನ್ನೂ ನರಳುತ್ತ ಮಲಗಿದ್ದನು. ಅವನಿಗೆ ಶೈತ್ಯೋಪಚಾರಗಳನ್ನು ಮಾಡಿ, ಶಂಬರನಿಗೆ ನರಕ ಪ್ರವೇಶಕಾಲವು ಸಂಭವಿಸಿರುವುದೆಂದು ಅವನಿಗೆ ಹೇಳಲು, ಅವನು ಯಾತನೆಯಿಂದ ಕಷ್ಟಪಡುತ್ತಿದ್ದಾಗ್ಯೂ ಎದ್ದು ಕುಳಿತುಕೊಂಡು, ಮಂಜೀರಕಾದಿಗಳನ್ನು ನೋಡಿ, 'ನೀವೆಲ್ಲರೂ ಸಮರ್ಥರಾಗಿ ಕಾಣುತ್ತೀರಿ. ಇಲ್ಲಿ ಆಯುಧಪಾಣಿಗಳಾದ ದುರಾತ್ಮರು ಐದು ಜನಗಳಿರುತ್ತಾರೆ. ಅವರು ಬಹಳ ಸಮರ್ಥರು. ಆಯುಧವಿಲ್ಲದೆ ನಿಮ್ಮೆಲ್ಲರನ್ನೂ ತೀರಿಸಿಕೊಳ್ಳುವುದಕ್ಕೆ ಅವರಲ್ಲಿ ಒಬ್ಬನೇ ಸಾಕಾಗಿರುವನಲ್ಲ!' ಎನ್ನಲು, ಅವರೆಲ್ಲರೂ ತಮ್ಮ ಪಿಸ್ತೂಲು ವಗೈರೆಗಳನ್ನು ತೋರಿಸಿದರು. ಅದರಿಂದ ಸಂತುಷ್ಟನಾಗಿ, ಅವನು ಚೇತರಿಸಿಕೊಂಡು ಎದ್ದು, ಅವರಿಗೆ ಆ ಕಟ್ಟಡದ ಮಾರ್ಗಗಳನ್ನೆಲ್ಲ ಸುಲಭವಾಗಿ ತಿಳಿಯುವಂತೆ ತೋರಿಸಿದನು.

ಇಷ್ಟರಲ್ಲಿಯೇ, ಸಮರಸಿಂಹನು ಭಾರೀ ಕುದುರೆ ಕಟ್ಟಲ್ಪಟ್ಟ ಒಂದು ಸಾರೋಟಿನಲ್ಲಿ ತನ್ನ ಮುಖ್ಯ ಭೃತ್ಯರೊಳಗೆ ಇಬ್ಬರಿಗೆ ಬಿಳೀ ದಿರಸನ್ನು ಹಾಕಿ ತನ್ನ ಜತೆಯಲ್ಲಿ ಕೂರಿಸಿಕೊಂಡು, ತಾನೂ ವೇಷಧಾರಿಯಾಗಿ, ನೂರಾರುಜನ ಬೇದಿರಸಿನಲ್ಲಿರತಕ್ಕವರಿಂದ ಪರಿವೃತನಾಗಿ, ರತ್ನಾಕರವನ್ನು ಪ್ರವೇಶಿಸಿದನು. ಆಗ ಶಂಬರನಿಗೆ ಯಾರೋ ದೊಡ್ಡ ಮನುಷ್ಯರು ಬಂದಿರುವರೆಂಬುದಾಗಿ ಅಲ್ಲಿನ ಕಾವಲುಗಾರನು ತಿಳಿಸಲು, ಶಂಬರನು 'ಬಂದಿರತಕ್ಕವನು ಯಾರೋ ತಿಳಿದುಕೊಂಡು ಬಾ' ಎಂದು ಅರ್ಥಪರನನ್ನು ಕಳುಹಿಸಿದನು. ಆಗ ಅರ್ಥಪರನು ಬಂದು ಸಮರಸಿಂಹನನ್ನು ನೋಡಿ, 'ಅಯ್ಯಾ! ನೀನು ಯಾರು?' ಎಂದು ಕೇಳಿದನು.

**ಸಮರಸಿಂಹ**—ನಾನು ಸಿಂಧುದೇಶದ ನಿವಾಸಿಯಾದ ಕಳಿಂಗನು.

**ಅರ್ಥಪರ**—ನಿನ್ನ ಕಸಬು ಏನು?

**ಸಮರಸಿಂಹ**—ನಾನು ಆ ದೇಶದಲ್ಲಿ ಲಾಯರಾಗಿರುವೆನು.

**ಅರ್ಥಪರ**—ಇಲ್ಲಿ ಏನುಕೆಲಸವಾಗಿ ಬಂದಿದ್ದೀಯೆ?

**ಸಮರಸಿಂಹ**—ಈ ದುರ್ಗಕ್ಕೆ ರತ್ನಾಕರವೆಂದು ಹೆಸರೋ?

**ಅರ್ಥಪರ**—ಅಹುದು.

**ಸಮರಸಿಂಹ**—ಇದಕ್ಕೆ ಯಜಮಾನನು ಶಂಬರನೋ ?

**ಅರ್ಥಪರ**—ಅಹುದು.

**ಸಮರಸಿಂಹ**—ಈ ಶಂಬರನ ಪಿತಾಮಹಂದರಿಗೆ ಬರತಕ್ಕ ಒಂದು ಕೋಟಿ ದ್ರವ್ಯವು ನಮ್ಮದೇಶದ ಕೋರ್ಟಿನಲ್ಲಿ ಡಿಪಾಜಿಟ್ಟಾಗಿರುವುದು ಇದಕ್ಕೆ ಈ ಶಂಬರನು ಹಕ್ಕುದಾರನು. ಈ ವಿಷಯವನ್ನು ಇವನಿಗೆ ತಿಳಿಸುವುದಕ್ಕೋಸ್ಕರ ಬಂದಿರುವೆನು.

ಸಮರಸಿಂಹನು ಈ ರೀತಿಯಲ್ಲಿ ಹೇಳಲು, ಅರ್ಥಪರನಿಗೆ ಬಹಳ ಸಂತೋಷವಾಯಿತು. ಶಂಬರನ ಅಪ್ಪಣೆಯಿಲ್ಲದೆಯೇ ಸಮರಸಿಂಹನನ್ನೂ ಅವನ ಜತೆಯಲ್ಲಿದ್ದ ವೇಷಧಾರಿಗಳಾದ ಇಬ್ಬರು ಭೃತ್ಯರನ್ನೂ ಸತ್ಕರಿಸಿ, ರತ್ನಾಕರದ ಬಳಕ್ಕೆ ಶಂಬರನ ಬಳಿಗೆ ಕರೆದುಕೊಂಡು ಹೋಗಿ, ಕಳಿಂಗನ ವಿದ್ಯಮಾನಗಳನ್ನೆಲ್ಲ ಶಂಬರನಿಗೆ ವಿಜ್ಞಾಪಿಸಿದನು.

ಇದನ್ನು ಕೇಳಿ, ಶಂಬರನು ಬಹಳ ಸಂತುಷ್ಟನಾಗಿ, ಸಮರಸಿಂಹಾದಿಗಳಿಗೆ ಸತ್ಕಾರವನ್ನು ಮಾಡಿ, ಅವನ ಗಾಡಿ ಕುದುರೆ ಭೃತ್ಯಾದಿಗಳಿಗೆಲ್ಲ ತಕ್ಕ ಏರ್ಪಾಡನ್ನು ಮಾಡಿ, ಎಲ್ಲರಿಗೂ ಆತಿಥ್ಯವನ್ನು ಮಾಡಿಸುವುದಕ್ಕೋಸ್ಕರ ಪ್ರಯತ್ನಿಸುತ್ತಿದ್ದನು. ಅಷ್ಟರಲ್ಲಿಯೇ ಅರ್ಥಪರನು ಶಂಬರನ ಬಳಿಗೆ ಹೋದನು.

**ಶಂಬರ**—ಅಯ್ಯಾ ! ಅರ್ಥಪರನೆ ! ನನ್ನ ಭೃತ್ಯನಾದ ಕಾವಲುಗಾರನು ನೀನು ಅಪಹರಿಸಿಕೊಟ್ಟಿದ್ದ ಪರಂತಪನಿಗೆ ಸಂಬಂಧಪಟ್ಟ ಕಾಗದ ಪತ್ರಗಳನ್ನೂ ಕಲಾವತಿಯಿಂದ ನಾನು ಅಪಹರಿಸಿದ್ದ ಉಯಿಲು ಮೊದಲಾದುವುಗಳನ್ನೂ ಅಪಹರಿಸಿದನು. ಕೂಡಲೇ ನಾನು ಅವನನ್ನು ಗುಂಡಿನಿಂದ ಹೊಡೆದೆನು. ಏಟುಬಿದ್ದು ರಕ್ತ ಸುರಿಯುತ್ತಿದ್ದಾಗ್ಯೂ, ಅವನು ಕಿಟಕಿಯಿಂದ ಧುಮಿಕಿ ಓಡಿಹೋದನು ಅವನನ್ನು ಪತ್ತೆಮಾಡಿ ಆ ಕಾಗದ ಪತ್ರಗಳನ್ನು ಸಂಪಾದಿಸಿಕೊಟ್ಟರೆ, ನಿನಗೆ ಪ್ರಯೋಜನವುಂಟಾಗುವುದು.

**ಅರ್ಥಪರ**—ನಿನ್ನ ಮಾತಿನಲ್ಲಿ ನನಗೆ ನಂಬುಗೆಯಿಲ್ಲ. ಮಾಡಬಾರದ ಕೆಲಸಗಳನ್ನು ಮಾಡಿ ನಿನಗೆ ಇದುವರೆಗೂ ಎಷ್ಟೋ ಸಹಾಯವನ್ನು ಮಾಡಿರುವೆನು. ಈ ಸಹಾಯಗಳಲ್ಲಿ ಯಾವುದಕ್ಕೂ ನೀನು ಪ್ರತಿ ಫಲ

ವನ್ನು ಕೊಟ್ಟಿಲ್ಲ. ಈ ದಿನ ನೀನು ನನ್ನ ಲೆಕ್ಕವನ್ನು ಫೈಸಲ್ಮಾಡದಿದ್ದರೆ, ಮುಂದೆ ನಾನು ನಿನಗೆ ಯಾವ ಉಪಕಾರವನ್ನೂ ಮಾಡುವುದಿಲ್ಲ.

**ಶಂಬರ**—ನಿನಗೆ ಈಗ ಎಷ್ಟು ದ್ರವ್ಯ ಬೇಕು?

**ಅರ್ಥಪರ**—ಒಂದುಲಕ್ಷ ಪೌನನ್ನು ನೀನು ಈಗ ಕೊಟ್ಟರೆ ಸರಿ; ಹಾಗಿಲ್ಲದ ಪಕ್ಷದಲ್ಲಿ, ಈ ಮೊಬಲಗನ್ನು ಬರಮಾಡಿಕೊಳ್ಳುವ ಕೆಲಸ ವನ್ನು ನಾನು ಶೀಘ್ರದಲ್ಲಿಯೇ ಮಾಡುವೆನು.

**ಶಂಬರ**—ನಿನಗೆ ಹುಚ್ಚು ಹಿಡಿಯಿತೆ?

**ಅರ್ಥಪರ**—ಎಲ್ಲರಿಗೂ ಹುಚ್ಚು ಹಿಡಿಸುವ ಶಕ್ತಿಯು ನನಗಿರುವಲ್ಲಿ, ನನಗೆ ಹುಚ್ಚು ಹಿಡಿಯುವುದೆಂದರೇನು?

**ಶಂಬರ**—ಹಾಗಾದರೆ ನಿನಗೆ ಒಂದುಕಾಸನ್ನೂ ಕೊಡುವುದಿಲ್ಲ. ನೀನು ಹೇಗೆ ಇಷ್ಟು ದೊಡ್ಡ ಮೊಬಲಗನ್ನು ಬರಮಾಡಿಕೊಳ್ಳುವೆಯೋ-ಮಾಡಿಕೊ.

**ಅರ್ಥಪರ**—ಇದು ಖಂಡಿತವೋ?

**ಶಂಬರ**—ಅದಕ್ಕೆ ಸಂದೇಹವೇನು?

**ಅರ್ಥಪರ**—ನೀನು ಮಾಡಿರುವ ಖೂನಿಗಳನ್ನೂ, ನೀನು ಕಾಮ ಮೋಹಿನಿಯನ್ನು ಅಪಹರಿಸಿ ಇಟ್ಟುಕೊಂಡಿರುವುದನ್ನೂ ಸ್ಮರಿಸಿಕೊ. ಈ ಸಂಗತಿಯನ್ನು ಸರಕಾರಕ್ಕೆ ನಾನು ತಿಳಿಸಿದ್ದೇ ಆದರೆ, ನಿನ್ನ ಆಸ್ತಿಗೂ ನಿನ್ನ ಪ್ರಾಣಕ್ಕೂ ಹಾನಿಯುಂಟಾಗುವುದು. ಬುದ್ಧಿಶಾಲಿಯಾಗಿರು. ಕೋಟ್ಯಂತರ ಪೌನುಗಳು ಈಗ ನಿನಗೆ ಲಭ್ಯವಾಗುವಂತಿದೆ. ನನಗೆ ಒಂದುಲಕ್ಷ ಪೌನು ಕೊಟ್ಟದ್ದರಿಂದ ನಿನಗೆ ನಷ್ಟವೇನೂ ಆಗುವುದಿಲ್ಲ. ಲೋಭದಿಂದ ನನಗೆ ನೀನು ವಾಗ್ದಾನಮಾಡಿರುವ ದ್ರವ್ಯವನ್ನು ಈಗ ಕೊಡದಿದ್ದರೆ, ಬಹಳ ಅನರ್ಥಕ್ಕೆ ಗುರಿಯಾಗುವೆ. ವಿನಾಶಕಾಲದಲ್ಲಿ ವಿಪರೀತಬುದ್ಧಿ ಹುಟ್ಟುವುದು ಪ್ರಪಂಚಧರ್ಮ. ಚೆನ್ನಾಗಿ ಪರ್ಯಾಲೋಚಿಸಿ, ನೀನು ಮಾಡಿರುವ ವಾಗ್ದಾನವನ್ನು ನೆರವೇರಿಸು. ಹಾಗಿಲ್ಲದ ಪಕ್ಷದಲ್ಲಿ, ಅರ್ಥಪರನ ಮಹಿಮೆಯು ಒಂದು ನಿಮಿಷಾರ್ಧದಲ್ಲಿ ನಿನಗೆ ಗೊತ್ತಾಗುವುದು.

**ಶಂಬರ**—ಎಲಾ ಪಾಪಿಯೇ! ನೀನು ಏನುಮಾಡಬಲ್ಲೆ?

**ಅರ್ಥಪರ**—ನಿನ್ನ ಪಾಪಕೃತ್ಯಗಳಿಗೆ ಅನುರೂಪವಾದ ನರಕಕ್ಕೆ ನಿನ್ನನ್ನು ಕಳುಹಿಸಬಲ್ಲೆನು.

**ಶಂಬರ**—ಹಾಗೆ ಮಾಡು. ನಿನ್ನ ಸಾಮರ್ಥ್ಯವನ್ನು ನೋಡುತ್ತೇನೆ!

**ಅರ್ಥಪರ**—ಹಾಗಾದರೆ ನನ್ನ ಸಾಮರ್ಥ್ಯವನ್ನು ನೋಡು!

ಹೀಗೆಂದು ರತ್ನಾಕರವನ್ನು ಬಿಟ್ಟು ಹೊರಡಲು ಬೆನ್ನನ್ನು ತಿರುಗಿಸಿದ ಕೂಡಲೆ, ಒಂದು ಗುಂಡಿನ ಶಬ್ದವು ಕೇಳಿಸಿತು. ಅರ್ಥಪರನು ಶಂಬರನ ಗುಂಡಿನ ಏಟನಿಂದ ಸತ್ತು ಬಿದ್ದನು. ಶಂಬರನು 'ಈ ಪಾಪಿಯು ಸತ್ತನು. ಇದುವರೆಗೂ ನನ್ನ ಗುಟ್ಟುಗಳೆಲ್ಲ ಇವನಿಗೆ ತಿಳಿದಿದ್ದುವು. ಈಗ ನನ್ನ ಗುಟ್ಟುಗಳನ್ನು ನಾನೊಬ್ಬನೇ ಬಲ್ಲೆನು; ಇನ್ನು ಯಾರಿಗೂ ತಿಳಿಯದು. ಇವನ ಶವವನ್ನು ಹೇಗಾದರೂ ಏಕಾಂತವಾಗಿ ಸಂಸ್ಕರಿಸಬೇಕು ಹಾಗಿಲ್ಲದ ಪಕ್ಷದಲ್ಲಿ ಗಲಾಟೆಗೆ ಅವಕಾಶವಾಗುವುದು. ಈಗ ಈ ಕಳಿಂಗನ ಆಗಮನವು ಒಂದು ಭಾಗದಲ್ಲಿ ಸಂತೋಷಕರವಾಗಿದ್ದಾಗ್ಯೂ, ಇನ್ನೊಂದು ಭಾಗದಲ್ಲಿ ಅನರ್ಥಕಾರಿಯಾಗಿರುವುದು. ಅರ್ಥಪರನನ್ನು ಕೊಂದ ಗುಂಡಿನ ಶಬ್ದವು ಕಳಿಂಗಾದಿಗಳಿಗೆ ಕೇಳಿದ್ದರೆ ಏನು ಗತಿ! ಅವರ ದೃಷ್ಟಿಪಥಕ್ಕೆ ಈ ಶವವು ಬಿದ್ದರೆ ನನ್ನ ಗತಿಯೇನು! ಈ ಶವವನ್ನು ಯಾವ ರೀತಿಯಲ್ಲಿ ಒಬ್ಬರಿಗೂ ತಿಳಿಯದಂತೆ ಈ ರತ್ನಾಕರದಿಂದ ಹೊರಕ್ಕೆ ಸಂಸ್ಕಾರಾರ್ಥವಾಗಿ ಕಳುಹಿಸಲಿ!' ಎಂದು ಯೋಚಿಸುತ್ತ, ದಿಗ್ಭ್ರಮೆಯಿಂದ, ಮಾಡತಕ್ಕ ಕೆಲಸವೇ ತಿಳಿಯದೆ ಮೂಢನಂತಿದ್ದನು.

## ಅಧ್ಯಾಯ ೧೭.

ಅಷ್ಟರಲ್ಲಿಯೇ ಪರಂತಪನು ಸುರಂಗಮಾರ್ಗವಾಗಿ ರತ್ನಾಕರದಿಂದ ಹೊರಗೆ ಹೋಗಿ, ಯಾರೋ ಒಬ್ಬ ದೊಡ್ಡಮನುಷ್ಯನಂತೆ ವೇಷಧಾರಿಯಾಗಿ ರತ್ನಾಕರದ ಬಾಗಲಿಗೆ ಕತ್ತಲೆಯಾಗುವ ಸಮಯದಲ್ಲಿ ಬಂದನು. ಅಷ್ಟರಲ್ಲಿಯೇ ಕಾವಲುಗಾರನು ಬಾರುಮಾಡಿದ ಬಂದೂಖವನ್ನು ಹಾರಿಸುವುದಕ್ಕೆ ಸಿದ್ಧವಾಗಿಟ್ಟುಕೊಂಡನು.

**ಕಾವಲುಗಾರ**—ನೀನು ಯಾರು ? ನಿನಗೆ ಇಲ್ಲಿ ಏನು ಕೆಲಸ ? ಏತಕ್ಕೋಸ್ಕರ ಬಂದಿರುವೆ ?

**ಪರಂತಪ**—ನಾನು ಶಂಬರನನ್ನು ನೋಡುವುದಕ್ಕೆ ಬಂದಿರುವೆನು.

**ಕಾವಲುಗಾರ** -ಈ ರಾತ್ರಿ ಯಾರನ್ನು ನೋಡುವುದಕ್ಕೂ ಅವನಿಗೆ ಪುರುಸತ್ತಿಲ್ಲ.

**ಪರಂತಪ**—ನಾನು ಬಂದಿರತಕ್ಕ ಕೆಲಸವು ಬಹಳ ಮುಖ್ಯವಾದುದು. ಈ ನಿಮಿಷದಲ್ಲಿಯೇ ಆತನನ್ನು ನಾನು ನೋಡಬೇಕು. ಆದುದರಿಂದ, ಸ್ವಲ್ಪವೂ ಸಾವಕಾಶಮಾಡದೆ ಈ ಕಾಗದವನ್ನು ಅವನ ವಶಕ್ಕೆ ತಲುಪಿಸು.

ಎಂದು ಹೇಳಿ, ಅವನಿಗೆ ಒಂದು ಕಾಗದವನ್ನು ಕೊಟ್ಟನು. ಅದರಲ್ಲಿ ಬರೆದಿದ್ದುದೇನೆಂದರೆ:—

ಅಯ್ಯಾ ! ಶಂಬರನೆ !

ಸುಮಿತ್ರನಿಗೆ ಕೊಡಬೇಕೆಂದು, ಅವನ ಮಿತ್ರನಾದ ಜಯಪಾಲನು ಒಂದುಕೋಟಿ ಪೌನುಗಳನ್ನು ನನ್ನ ವಶಪಡಿಸಿ ಮೃತಪಟ್ಟನು. ಅದನ್ನು ಅವನಿಗೆ ತಲುಪಿಸಬೇಕೆಂದು ನಾನು ಕಲ್ಯಾಣಪುರಕ್ಕೆ ಹೋಗಿ ವಿಚಾರಿಸುವಲ್ಲಿ, ಅವನು ಮೃತಪಟ್ಟನೆಂಬುದಾಗಿಯೂ, ನೀನೇ ಅವನಿಗೆ ವಾರಸುದಾರನೆಂಬುದಾಗಿಯೂ ತಿಳಿಯಬಂದಿತು. ನನಗೆ ಬೇರೆ ಕೆಲಸವಿರುವುದರಿಂದ, ಕೂಡಲೇ ನಿನ್ನ ಭೇಟಿಯನ್ನು ಅಪೇಕ್ಷಿಸುತ್ತೇನೆ.

ಧರ್ಮಪಾಲ.

ಕಾವಲುಗಾರನು, ಈ ಕಾಗದವನ್ನು ತೆಗೆದುಕೊಂಡುಹೋಗಿ ಶಂಬರನಿಗೆ ಕೊಟ್ಟನು. ಧರ್ಮಪಾಲನನ್ನು ಕರೆದುಕೊಂಡು ಬರಬಹುದೆಂದು, ಶಂಬರನು ಆಜ್ಞೆಮಾಡಿದನು. ಅವನ ಆಜ್ಞೆಗೆ ಅನುಸಾರವಾಗಿ ಕಾವಲುಗಾರನು ಬಂದು, ಅವನನ್ನು ಒಳಕ್ಕೆ ದಯೆಮಾಡಿಸಬಹುದೆಂದು ಹೇಳಿದನು. ಪರಂತಪನು, ಕಾವಲುಗಾರನ ಜತೆಯಲ್ಲಿ ಶಂಬರನ ಬಳಿಗೆ ಹೋದನು. ಇವನು ಒಳಕ್ಕೆ ಹೋದಕೂಡಲೆ, ಶಂಬರನು ಇವನಿಗೆ ಸತ್ಕರಿಸಿ, ಕುರ್ಚಿಯನ್ನು ಕೊಟ್ಟು, ಅವನು ಕುಳಿತುಕೊಳ್ಳುತ್ತಲೂ ತಾನೂ ಒಂದು ಕುರ್ಚಿಯಮೇಲೆ ಕುಳಿತುಕೊಂಡನು.

**ಶಂಬರ**—ನಿನ್ನ ಕಾಗದವನ್ನು ನೋಡಿದರೆ, ನೀನು ಲಾಯರಾಗಿರಬೇಕೆಂದು ತೋರುತ್ತದೆ.

**ಪರಂತಪ**—ಅಹುದು ! ನೀನು ಚೆನ್ನಾಗಿ ಊಹಿಸಿದೆ. ಸುಮಿತ್ರನನ್ನು ಹುಡುಕಿಕೊಂಡು ನಾನು ಕಲ್ಯಾಣಪುರಕ್ಕೆ ಬಂದೆನು. ಆತನು ಸ್ವರ್ಗಸ್ಥನಾದ ವಿಷಯ ತಿಳಿದದ್ದರಿಂದ ಇಲ್ಲಿಗೆ ಬಂದೆನು.

**ಶಂಬರ**—ಬಹಳ ಸಂತೋಷವಾಯಿತು. ಸುಮಿತ್ರನಿಗೆ ಬರಬೇಕಾದ ಆ ದ್ರವ್ಯವನ್ನು ತಂದಿರುವೆಯಾ ?

**ಪರಂತಪ** - ಆಹಾ ! ತಂದು ಇರುವೆನು ! ಅದು ಕಲ್ಯಾಣಪುರದಲ್ಲಿರುವುದು. ನೀನು ವಾರಸುದಾರಸರ್ಟಿಫಿಕೇಟನ್ನು ತೆಗೆದುಕೊಂಡು ರಶೀತಿಯನ್ನು ಕೊಟ್ಟಪಕ್ಷದಲ್ಲಿ, ಈ ದ್ರವ್ಯವು ನಿನಗೆ ಕೊಡಲ್ಪಡುವುದು.

**ಶಂಬರ**—ನ್ಯಾಯವೇ ಸರಿ ! ಈ ಕೆಲಸಗಳನ್ನೆಲ್ಲ ಮಾಡೋಣ. ನೀನು ಇಷ್ಟು ಶ್ರಮವನ್ನು ತೆಗೆದುಕೊಂಡು ಈ ರತ್ನಾಕರಕ್ಕೆ ಬಂದದ್ದಕ್ಕೋಸ್ಕರ ನಾನು ಬಹಳ ಕೃತಜ್ಞನಾಗಿ ಇದ್ದೇನೆ.

**ಪರಂತಪ**—ನಿನ್ನ ಉಪಚಾರದಿಂದ ನಾನು ತೃಪ್ತನಾದೆನು. ನನಗೆ ಅನುಜ್ಞೆಯಾದರೆ ನಾನು ಕಲ್ಯಾಣಪುರಕ್ಕೆ ಹೊರಡುವೆನು. ನಾಳೇದಿವಸ ಭೋಜನಾನಂತರ ಬಂದು ನಿನ್ನ ಭೇಟಿಯನ್ನು ಮಾಡಿಕೊಳ್ಳುವೆನು. (ಎಂದು ಹೊರಡುವುದಕ್ಕೆ ಎದ್ದನು)

**ಶಂಬರ**—ನೀನು ನನಗೆ ಅತಿಥಿಯಾಗಿರುವೆ. ಈಗ ಕತ್ತಲೆಯಾಯಿತು. ಕಲ್ಯಾಣಪುರಕ್ಕೆ ನಾಳೇದಿವಸ ಪ್ರಯಾಣಮಾಡಬಹುದು. ಈದಿನ ರಾತ್ರಿ ಇಲ್ಲಿಯೇ ಇದ್ದುಗೊಂಡು, ನಾನು ಮಾಡತಕ್ಕ ಸತ್ಕಾರವನ್ನು ಪರಿಗ್ರಹಿಸಬೇಕು.

**ಪರಂತಪ**—ನಿನ್ನ ಸತ್ಕಾರವನ್ನು ಪರಿಗ್ರಹಿಸುವುದಕ್ಕೋಸ್ಕರವೇ ನಾನು ಇಲ್ಲಿಗೆ ಬಂದಿರುವೆನು. ನಿನ್ನ ಇಷ್ಟಕ್ಕೆ ಅನುರೂಪವಾಗಿ ನಡೆದುಕೊಳ್ಳುವೆನು.

**ಶಂಬರ**—ಸಿಂಧುದೇಶದಿಂದ ಕಳಿಂಗನೆಂಬುವನು ಇಲ್ಲಿಗೆ ಬಂದಿರುವನು. ಆತನೂ ನಿನ್ನಂತೆಯೇ ಲಾಯರಾಗಿರುವನು. ಇದಲ್ಲದೆ, ಅವನೂ ನಿನ್ನಂತೆಯೇ ನನ್ನ ಭಾಗ್ಯಕ್ಕೆ ಮೂಲಕಾರಣನಾಗಿರುವನು. ಆತನೊಡನೆ ಮಾತನಾಡುತ್ತ ಇರು. ನಾನು ಶೀಘ್ರದಲ್ಲಿಯೇ ಭೋಜನಾದಿಗಳಿಗೆ ಏರ್ಪಾಡನ್ನು ಮಾಡಿ ಬರುವೆನು.

ಹೀಗೆಂದು ಹೇಳಿ, ಸಮರಸಿಂಹನ ಬಿಡಾರಕ್ಕೆ ಪರಂತಪನನ್ನು ಕಳುಹಿಸಿಕೊಟ್ಟು, ಶಂಬರನು ಅರ್ಥಪರನ ಶವವನ್ನು ಆಚ್ಛಾದಿಸುವ ಯೋಚನೆಯಿಂದ ಹೊರಟನು; ಅಷ್ಟರಲ್ಲೇ, ಕಾಮಮೋಹಿನಿಯ ಶುಶ್ರೂಷೆಗಾಗಿ ನಿಯಮಿಸಲ್ಪಟ್ಟಿದ್ದ ದುರ್ಮತಿಯು ಬಂದಳು.

**ದುರ್ಮತಿ**—ಎಲೈ ಶಂಬರನೆ ! ಕಾಮಮೋಹಿನಿಯ ತಂದೆಗೆ, ಬಂಧವಿಮೋಚನೆಯನ್ನು ಮಾಡುವುದಾಗಿಯೂ ಈ ರತ್ನಾಕರಕ್ಕೆ ಯಜಮಾನನನ್ನಾಗಿ ಮಾಡುವುದಾಗಿಯೂ ಹೇಳಿ, ಬಹಳ ಆಶೆಯನ್ನು ಹುಟ್ಟಿಸಿ, ಕಾಮಮೋಹಿನಿಗೆ ನಿನ್ನನ್ನು ಮದುವೆಮಾಡಿಕೊಳ್ಳುವುದಕ್ಕೆ ಪ್ರೇರಿಸಬೇಕೆಂದು ಹೇಳಿದೆನು. ಅವನು ಅನೇರೀತಿಯಲ್ಲಿ ಪ್ರೇರಣೆಯನ್ನು ಮಾಡಿದನು. ಕಾಮಮೋಹಿನಿಯು ನಿನ್ನನ್ನು ವಿವಾಹಮಾಡಿಕೊಳ್ಳುವುದಕ್ಕೆ ಒಪ್ಪಿರುವಳು.

**ಶಂಬರ**—ನಿನ್ನ ಉಪಕಾರದಿಂದ ನಾನು ಬಹಳ ಸಂತುಷ್ಟನಾಗಿರುವೆನು. ಈ ವಿವಾಹವು ಪೂರಯಿಸಿದಕೂಡಲೆ, ನಿನಗೆ ಒಂದುಲಕ್ಷ ಪೌನುಗಳನ್ನು ಕೊಡುವೆನು. ಇದಲ್ಲದೆ, ಕಾಮಮೋಹಿನಿಗೆ ಸೇವಕಳಾಗಿರುವಂತೆ ನಿನ್ನನ್ನು ನಿಯಮಿಸಿ, ತಿಂಗಳಿಗೆ ಒಂದುಸಾವಿರ ಪೌನು ಸಂಬಳವನ್ನು ಕೂಡ ಕೊಡುವೆನು ಈ ದಿನವೇ ವಿವಾಹಕ್ಕೆ ಶುಭವಾಗಿರುವುದು. ಕಾರ್ಯಾರ್ಥವಾಗಿ ಬಂದಿರತಕ್ಕ ಕಳಿಂಗಾದಿಗಳು ನನ್ನ ಅತಿಥಿಗಳಾಗಿರಲಿ. ಅಪ್ರಾರ್ಥಿತವಾಗಿ ಪುರೋಹಿತರೂ ಕೂಡ ಬಂದಿರುವರು. ಈ ವಿವಾಹಮಹೋತ್ಸವವು ನಡೆಯುವುದಕ್ಕೆ ಬೇಕಾದ ಕೆಲಸಗಳೆಲ್ಲ ಸಿದ್ಧವಾಗಿರುವುವು. ಈ ಸಂಗತಿಯನ್ನು ಕಾಮಮೋಹಿನಿಗೆ ಶ್ರುತಪಡಿಸು.

ಈ ವರ್ತಮಾನವನ್ನು ದುರ್ಮತಿಯು ಕಾಮಮೋಹಿನಿಗೆ ಹೋಗಿ ತಿಳಿಸಿದಳು. ಇದನ್ನು ಕೇಳಿ, ಕಾಮಮೋಹಿನಿಯು ಆತ್ಮಗತವಾಗಿ " ಈ ದುರಾತ್ಮನಾದ ಶಂಬರನು, ನಾನು ವಿವಾಹಮಾಡಿಕೊಳ್ಳುವುದಿಲ್ಲವೆಂದು ಹಠವನ್ನು ಹಿಡಿದರೆ ನನ್ನ ತಂದೆಯನ್ನು ಕೊಲ್ಲುವನು. ನನಗೋಸ್ಕರ ನನ್ನ ತಂದೆ ಯೇತಕ್ಕೆ ಸಾಯಬೇಕು ? ಅವನಾದರೂ ಬದುಕಿರಲಿ. ನಾನೇ ಮೃತನಾದ ಪರಂತಪನ ಮಾರ್ಗವನ್ನು ಅನುಸರಿಸುವೆನು. ಹೀಗೆ ಅನುಸರಿಸುವುದಕ್ಕೆ ಸಾಧಕವಾದ ಈ ವಿಷವು ನನಗೆ ಮಹೋಪಕಾರಿಯಾದುದು. ಈ ವಿವಾಹವು ಉಪಕ್ರಮವಾಗುವುದಕ್ಕೆ ಮುಂಚೆಯೇ ನನ್ನ ತಂದೆಯ

ಬಂಧಮೋಕ್ಷವನ್ನು ಅಪೇಕ್ಷಿಸುವೆನು. ಅವನಿಗೆ ಬಂಧವಿಮೋಚನೆಯನ್ನು ಮಾಡಿದಕೂಡಲೆ, ಕಾರ್ಯಾರ್ಥವಾಗಿ ಇವನನ್ನು ಈ ರತ್ನಾಕರದಿಂದ ಹೊರಕ್ಕೆ ಕಳುಹಿಸಿಕೊಡುವೆನು. ತರುವಾಯ ವಿವಾಹಕಾಲವು ಸಮೀಪಿಸುವುದರೊಳಗಾಗಿಯೇ ಈ ದೇಹವನ್ನು ಬಿಡುವೆನು." ಎಂದು ನಿಶ್ಚಯಿಸಿಕೊಂಡು, ದುರ್ಮತಿಯನ್ನು ಕುರಿತು "ಎಲೈದುರ್ಮತಿಯೆ ! ನಿನ್ನ ಇಷ್ಟಪ್ರಕಾರ ಕೆಲಸವನ್ನು ನಡಿಸಿಕೊ. ಆದರೆ, ನನ್ನ ತಂದೆಗೆ ಬಂಧವಿಮೋಚನೆಯನ್ನು ಮಾಡಿ ಆತನಿಗೆ ಮಾಡತಕ್ಕ ಸಹಾಯವನ್ನು ಮಾಡಿ ಈ ರತ್ನಾಕರದಿಂದ ಆಚೆಗೆ ಹೊರಡಿಸಿದರೆ, ನಾನು ನಿನ್ನ ಮಾತಿಗೆ ಒಳಪಡುವೆನು. ಆತನ ಎದುರಿಗೆ ಈ ಪುನರ್ವಿವಾಹಕ್ಕೆ ಒಪ್ಪುವುದು ನನಗೆ ಬಹಳ ಕ್ಲೇಶಕರವಾಗಿದೆ !" ಎಂದು ಹೇಳುತ್ತಿರುವಾಗಲೇ, ಇವುಗಳನ್ನು ಏಕಾಂತವಾಗಿ ಕೇಳುತ್ತಿದ್ದ ಶಂಬರನು ಎದುರಿಗೆ ಬಂದು ನಿಂತುಕೊಂಡು 'ಎಲೈ ಪ್ರಾಣಕಾಂತೆಯೆ! ನಿನ್ನ ಇಷ್ಟವಿದ್ದಂತೆ ನಡೆಸುವುದರಲ್ಲಿ ಯಾವ ಸಂಶಯವೂ ಇಲ್ಲ. ಈಗಲೇ ನಿನ್ನ ಮನೋರಥವನ್ನು ನಡೆಸುವೆನು." ಎಂದು ಹೇಳಿ, ಈಕೆಯ ತಂದೆಯನ್ನು ಕರೆಯಿಸಿ, ಅವನ ಕೈಕಾಲು ಬೇಡಿಗಳನ್ನು ತೆಗೆಯಿಸಿ, ಆತನಿಗೆ ಒಂದು ಲಕ್ಷ ಪೌನು ನೋಟುಗಳನ್ನು ಕೊಟ್ಟು, ನಿನ್ನ ಇಷ್ಟಬಂದ ಕಡೆಗೆ ಹೋಗಬಹುದೆಂದು ಆಜ್ಞೆಯನ್ನು ಮಾಡಿದನು. ಅವನು ಶಂಬರನು ಕೊಟ್ಟ ನೋಟುಗಳನ್ನು ಅವನಿಗೆ ವಾಪಸುಮಾಡಿ "ಅಯ್ಯಾ ! ಶಂಬರನೆ ! ನೀನು ನನ್ನ ಬಂಧವಿಮೋಚನೆಯನ್ನು ಮಾಡಿದ್ದಕ್ಕೆ ನಾನು ಬಹಳ ಕೃತಜ್ಞನಾಗಿರುವೆನು. ದ್ರವ್ಯದಮೇಲಿನ ಆಶೆ ನನಗಿಲ್ಲ. ಇದನ್ನು ನೀನೇ ಇಟ್ಟುಕೊ. ನಾನು ಪುನಃ ನಿನ್ನನ್ನು ಕಾಣುವೆನು. ನೀನು ಈಗಲಾದರೂ ದುರ್ಮಾರ್ಗಪ್ರವರ್ತನೆಯನ್ನು ಬಿಟ್ಟು ಪರಸ್ತ್ರೀಯಾದ ಕಾಮಮೋಹಿನಿಯಲ್ಲಿ ಆಶೆಯನ್ನು ತೊರೆದು ಸುಖವಾಗಿ ಬದುಕು. ಹಾಗಿಲ್ಲದೆ ಈ ಅಗಮ್ಯಾಗಮನದಲ್ಲಿ ಆಸಕ್ತಿಯನ್ನು ಬಿಡದಿದ್ದರೆ, ನಿನ್ನ ದುಷ್ಕರ್ಮದ ಫಲವನ್ನು ನೀನು ಅನುಭವಿಸಬೇಕಾಗುತ್ತದೆ. ನಾನು ಹೋಗಿಬರುವೆನು." ಎಂದು ಹೇಳಿ, ರತ್ನಾಕರವನ್ನು ಬಿಟ್ಟು ಕಲ್ಯಾಣಪುರದ ಮಾರ್ಗವನ್ನು ಅನುಸರಿಸಿದನು.

ಶಂಬರನು, ವಿವಾಹಮಹೋತ್ಸವಕ್ಕೆ ಬೇಕಾದ ಸಲಕರಣೆಗಳನ್ನೆಲ್ಲ ಬಹಳ ಉತ್ಸಾಹದಿಂದ ಅಣಿಗೊಳಿಸುತ್ತಿದ್ದನು. ಅಷ್ಟರಲ್ಲಿಯೇ ಏಕಾಂತ

ವಾದ ಸುರಂಗಮಾರ್ಗವನ್ನು ಪ್ರವೇಶಿಸಿದ್ದ ಮಂಜೀರಕನು ಏಕಾಂತವಾಗಿ ಕಾಮಮೋಹಿನಿಯ ಕೊಟ್ಟಡಿಯ ಬಳಿಗೆ ಬಂದು, ಅಲ್ಲಿ ಔದಾಸೀನ್ಯದಿಂದ ಬೀಟುತಿರುಗುತ್ತಿದ್ದವನ ಕೈಯಿಂದ ಆಯುಧವನ್ನು ಕಿತ್ತುಕೊಂಡು, ಅವನ ಬಾಯಿಗೆ ಬಟ್ಟೆಯನ್ನು ತುರುಕಿ, ಕೈಕಾಲುಗಳನ್ನು ಕಟ್ಟಿ ಒಂದು ಮೂಲೆಯಲ್ಲಿ ಕೆಡವಿ, ಅಲ್ಲಿಂದ ಕಾಮಮೋಹಿನಿಯ ಕೊಟ್ಟಡಿಯನ್ನು ಪ್ರವೇಶಿಸಲು, ದುರ್ಮತಿಯು ಗಲಾಟೆಮಾಡುವುದಕ್ಕೆ ಉಪಕ್ರಮಿಸಿದಳು. ಅವಳಿಗೂ ಬಾಯಿಗೆ ಬಟ್ಟೆಯನ್ನು ತುರುಕಿ, ಕೈಕಾಲುಗಳನ್ನು ಕಟ್ಟಿಹಾಕಿ, ತನ್ನ ಜತೆಯಲ್ಲಿ ಕರೆದುಕೊಂಡು ಹೋಗಿದ್ದ ಇಬ್ಬರು ಶೂರರನ್ನು ಬಾಗಿಲಲ್ಲಿ ನಿಲ್ಲಿಸಿ, ಪರಂತಪ ಸಮರಸಿಂಹರ ವಿನಾ ಇನ್ನಾರು ಬಂದಾಗ್ಯೂ ಗುಂಡಿನಿಂದ ಹೊಡೆದು ಕೊಲ್ಲಬಹುದೆಂದು ಆಜ್ಞೆಮಾಡಿ, ಕಾಮಮೋಹಿನಿಯನ್ನು ಕುರಿತು " ಎಲೈ ಕಾಮಮೋಹಿನಿಯೆ ! ನಿನ್ನ ಕಷ್ಟವು ಪರಿಹಾರವಾಯಿತು. ಈ ದುರಾತ್ಮನಾದ ಶಂಬರನು ಪರಂತಪ ಸತ್ತನೆಂಬುದಾಗಿ ಹುಟ್ಟಿಸಿರುವ ವದಂತಿಯು ಸುಳ್ಳು. ಪರಂತಪನು ಈ ಕಟ್ಟಡದಲ್ಲಿಯೇ ಇರುವನು. ಶಂಬರನ ಆಯುಸ್ಸು ಮುಗಿಯುತ್ತ ಬಂದಿತು. ನೀನು ಭಯಪಡಬೇಡ. ಪಾತಿವ್ರತ್ಯಸಂರಕ್ಷಣೆಗೋಸ್ಕರ ದೇಹವನ್ನು ಬಿಡಬೇಕೆಂದು ಸಂಪಾದಿಸಿಟ್ಟುಕೊಂಡಿರತಕ್ಕ ವಿಷವನ್ನು ಬಿಸಾಕು. ಶೀಘ್ರದಲ್ಲಿಯೇ ನಿನ್ನ ಪಾತಿವ್ರತ್ಯಕ್ಕೆ ಅನುರೂಪವಾದ ಸೌಖ್ಯವನ್ನು ಹೊಂದುವೆ. ಶಂಬರನ ಕಾವಲುಗಾರನನ್ನು ಮುಷ್ಕೀಕಟ್ಟಿ ಕೆಡವಿರುತ್ತೇನೆ. ಬಾಗಿಲಿನಲ್ಲಿ ನಿಲ್ಲಿಸಲ್ಪಟ್ಟಿರುವ ಕಾವಲುಗಾರರು ಪರಂತಪನ ಕಡೆಯವರು. ಇನ್ನು ನಾನು ಮಾಡತಕ್ಕ ಕೆಲಸವು ಸ್ವಲ್ಪವಿರುವುದು. ಒಂದು ಅರ್ಧಘಂಟೆಯಹೊತ್ತು ಸ್ಥೈರ್ಯವನ್ನು ಅವಲಂಬಿಸಿ ಇಲ್ಲಿಯೇ ಇರು. ಪರಂತಪನನ್ನು ಕರೆದುಕೊಂಡು ನಾನು ಜಾಗ್ರತೆಯಾಗಿ ಬರುವೆನು. " ಎಂದು ಹೇಳಿ, ಪ್ರತ್ಯುತ್ತರವನ್ನೂ ಕೂಡ ನಿರೀಕ್ಷಿಸದೆ, ಸಮರಸಿಂಹ ಪರಂತಪರ ಬಳಿಗೆ ಹೋಗಿ, ಕಾಮಮೋಹಿನಿಗೆ ಅಪಾಯಬರದಂತೆ ಮಾಡಿರುವ ಬಂದೋಬಸ್ತನ್ನು ತಿಳಿಸಿ, ಸಮರಸಿಂಹನನ್ನು ಕುರಿತು "ಅಯ್ಯಾ! ಸಮರಸಿಂಹ ! ಈ ಕಿರಾತನು ಈಗತಾನೆ ಅರ್ಥಪರನೆಂಬ ಒಬ್ಬ ಲಾಯರನ್ನು ಖೂನಿಮಾಡಿರುವನು. ಈಗ ಇವನನ್ನು ದಸ್ತಗಿರಿಮಾಡಬೇಕು. ಹೀಗೆ ಮಾಡುವುದಕ್ಕೆ ಮುಂಚೆ, ಈ ದುರ್ಗದ ನಾಲ್ಕುಬಾ

ಗಿಲುಗಳಲ್ಲಿಯೂ ಬಾರುಮಾಡಲ್ಪಟ್ಟ ಬಂದೂಖಿಗಳುಳ್ಳ ನಾಲ್ಕು ಜನರಿರುವರು; ಇವರ ಆಯುಧಗಳನ್ನು ಕಿತ್ತುಕೊಂಡು ಇವರನ್ನು ಮುಷ್ಕೀಕಟ್ಟಿ ಕೆಡವಿ ಅನಂತರದಲ್ಲಿ ಶಂಬರನನ್ನು ದಸ್ತಗಿರಿಮಾಡಬೇಕು" ಎಂದು ಹೇಳಿದನು.

**ಸಮರಸಿಂಹ**— ಈ ಕೆಲಸವನ್ನು ಮಾಡುವುದಕ್ಕೆ ನಿನಗಿಂತಲೂ ಸಮರ್ಥರಾರೂ ಇಲ್ಲ

**ಮಂಜೀರಕ** – ಅಪ್ಪಣೆಯಾದರೆ ಈ ಕೆಲಸವನ್ನು ಮಾಡಿ ಬರುವೆನು.

**ಪರಂತಪ**—ನಿನ್ನ ಬೆಂಬಲಕ್ಕೆ ನಾನೂ ಬರುವೆನು.

**ಸಮರಸಿಂಹ**—ಆಗಬಹುದು. ನಿಮಗೆ ವಿಜಯವಾಗಲಿ; ಹೋಗಿಬನ್ನಿ.

ಈ ರೀತಿಯಲ್ಲಿ ಸಮರಸಿಂಹನ ಅಪ್ಪಣೆಯನ್ನು ತೆಗೆದುಕೊಂಡು, ಪರಂತಪ ಮಂಜೀರಕರು ಹೋಗಿ, ಲೀಲೆಯಿಂದ ಕ್ರಮಕ್ರಮವಾಗಿ ಈ ನಾಲ್ಕು ಜನಗಳ ಆಯುಧಗಳನ್ನೂ ಅಪಹರಿಸಿ, ಅವರನ್ನು ಮುಷ್ಕೀಕಟ್ಟಿ ಕೆಡವಿ ಬಂದರು. ಅನಂತರದಲ್ಲಿ ಸಮರಸಿಂಹನು ತನ್ನ ಮ್ಯಾಜಿಸ್ಟ್ರೇಟ್ ದಿರಸನ್ನು ಹಾಕಿಕೊಂಡು, ತನ್ನ ಪೊಲೀಸ್‌ನವರಲ್ಲಿ ಇಬ್ಬರಿಗೆ ದಿರಸನ್ನು ಹಾಕಿಸಿ ಕರೆದುಕೊಂಡು, ಭೋಜನಶಾಲೆಯ ಬಳಿಯಲ್ಲಿರತಕ್ಕ ಶಂಬರನ ಬಳಿಗೆ ಹೋದನು.

**ಶಂಬರ**—ನಿಮ್ಮನ್ನು ಇಲ್ಲಿಗೆ ಬಿಟ್ಟವರಾರು? ಈ ರೀತಿಯಲ್ಲಿ ಅತಿಕ್ರಮ ಪ್ರವೇಶಮಾಡುವುದಕ್ಕೆ ಕಾರಣವೇನು? ಇಲ್ಲಿಂದ ಆಚೆಗೆ ಹೊರಟುಹೋಗಿ.

**ಸಮರಸಿಂಹ**—ಎಲಾ ನೀಚ ! ಈ ಸಂಸ್ಥಾನಾಧಿಪತಿಯ ಹೆಸರಿನಲ್ಲಿ ನಾನು ನಿನ್ನನ್ನು ದಸ್ತಗಿರಿಮಾಡಿದ್ದೇನೆ.

ಎಂದು ಹೇಳಿ, ಅವನನ್ನು ಹಿಡಿದು, ಕೈಕಾಲುಗಳಿಗೆ ಬೇಡಿಯನ್ನು ತೊಡಿಸಿದನು. ಕೂಡಲೆ ಶಂಬರನು ವಿವರ್ಣವದನನಾದನು.

**ಶಂಬರ**—ಎಲೈ ಸಮರಸಿಂಹನೆ ! ನೀನು, ಗತಿಸಿದ ಸುಮಿತ್ರಾದಿಗಳಿಗೆ ಪರಮಾಪ್ತನು. ಆದುದರಿಂದ, ನನ್ನನ್ನು ರಕ್ಷಿಸು. ಏತಕ್ಕೆ ನನ್ನನ್ನು ದಸ್ತಗಿರಿ ಮಾಡುವೆ ? ನಾನು ಏನು ಅಪರಾಧವನ್ನು ಮಾಡಿರುವೆನು ?

**ಸಮರಸಿಂಹ**—ನಿನ್ನ ಅಪರಾಧಗಳೆಲ್ಲ ಶೀಘ್ರದಲ್ಲಿಯೇ ನಿನಗೆ ಗೊತ್ತಾಗುವುವು.

**ಮಂಜೀರಕ**—ಅನೇಕ ಖೂನಿಗಳನ್ನು ಮಾಡಿ ಇದುವರೆಗೂ ದಕ್ಕಿಸಿಕೊಂಡಿರುವೆ. ಸತ್ಯಶರ್ಮ ಮೊದಲಾದ ಧರ್ಮಿಷ್ಠರನ್ನು ಜೀವಸಹಿತ ಸುಟ್ಟುಹೋಗುವಂತೆ ನೀನು ಮಾಡಿದ್ದಕ್ಕೆ ತಕ್ಕ ಪ್ರತೀಕಾರವು ನಿನಗೆ

ಸನ್ನಿಹಿತವಾಗಿರುವುದು. ಎಲ್ಲಿ, ನಿನ್ನ ಕೈಗಳನ್ನು ತೆಗೆ. ಬೇಡಿಗಳಿಂದ ಅವುಗಳಿಗೆ ಅಲಂಕಾರವನ್ನು ಮಾಡುವೆನು.

**ಶಂಬರ**—(ಆತ್ಮಗತ) ತನ್ನ ದುರ್ಗವು, ಶೂರರಾಗಿಯೂ ನಂಬಿಕೆಯುಳ್ಳವರಾಗಿಯೂ ಆಯುಧಪಾಣಿಗಳಾಗಿಯೂ ಇರತಕ್ಕ ಭೃತ್ಯರಿಂದ ಕಾಪಾಡಲ್ಪಟ್ಟದ್ದು. ಈ ಜನಗಳು ಹೇಗೆ ಒಳಕ್ಕೆ ಪ್ರವೇಶಿಸಿದರು! ಇರಲಿ, ಇವರಿಗೆ ತಕ್ಕ ಬಂದೋಬಸ್ತನ್ನು ಮಾಡುವೆನು. (ಪ್ರಕಾಶ) ಎಲಾ ಸಮರಸಿಂಹಾದಿ ದುಷ್ಟರೆ! ನನಗೆ ಕೈಬೇಡಿಹಾಕುವುದಕ್ಕೆ ಪ್ರಯತ್ನಮಾಡುವಿರಾ! ನಿಮ್ಮೆಲ್ಲರನ್ನೂ ಈ ದುರ್ಗಕ್ಕೆ ಬಲಿಕೊಡುವೆನು.

ಎಂದು ಸಿಡಿಲಿನಂತೆ ಮಂಜೀರಕನ ಮೇಲೆ ಬಿದ್ದು, ಅವನನ್ನು ನೆಲಕ್ಕೆ ಕೆಡವಿ, ಸಮರಸಿಂಹಾದಿಗಳು ಮೇಲೆ ಬೀಳುವುದರೊಳಗಾಗಿ ಅಲ್ಲಿಂದ ತಪ್ಪಿಸಿಕೊಂಡು ಆ ದುರ್ಗವನ್ನು ಬಿಟ್ಟು ಪರಾರಿಯಾಗುವುದಕ್ಕೋಸ್ಕರ ಹೊರಟನು. ಆ ಕಾಲಕ್ಕೆ ಸರಿಯಾಗಿ, ಕಲಾವತಿಯು ಬಾಗಿಲಿಗೆ ಬಂದಳು.

**ಕಲಾವತಿ**—ಎಲಾ ನೀಚನಾದ ಶಂಬರನೆ! ನಿಲ್ಲು; ಓಡಿಹೋಗಬೇಡ. ಒಂದು ಹೆಜ್ಜೆಯನ್ನು ಮುಂದಕ್ಕೆ ಹಾಕಿದರೆ, ನಿನ್ನನ್ನು ಗುಂಡಿನಿಂದ ಹೊಡೆದು ಯಮಪುರಿಗೆ ಕಳುಹಿಸುವೆನು.

ಬಾರುಮಾಡಲ್ಪಟ್ಟ ಪಿಸ್ತೂಲನ್ನು ಅವನಕಡೆಗೆ ತಿರುಗಿಸಿ ಹಿಡಿದುಕೊಂಡಳು.

**ಶಂಬರ**—(ಆತ್ಮಗತ) ಸಂಪತ್ತುಗಳು ಹೇಗೋ-ಹಾಗೆ ವಿಪತ್ತುಗಳೂ ಗುಂಪುಗುಂಪಾಗಿ ಬರುವುವು. ಈ ಚಂಡಾಲಸ್ತ್ರೀಯು ಪೆಟ್ಟುತಿಂದ ಹೆಣ್ಣು ಹುಲಿಗೆ ಸಮಾನಳಾದವಳು. ನಾನು ಇವಳಿಗೆ ಬಹು ದ್ರೋಹವನ್ನು ಮಾಡಿರುವೆನು. ಅದಕ್ಕೆ ಪ್ರತೀಕಾರವನ್ನು ಮಾಡುವುದಕ್ಕೋಸ್ಕರ ಬಂದಿರುವಳು. ಇನ್ನೇನುಮಾಡಲಿ! (ಪಕಾಶ) ಎಲೈ ಕಲಾವತಿಯೆ! ನನ್ನ ಅಪರಾಧವನ್ನು ಕ್ಷಮಿಸು. ಈಗ ನನಗೆ ಮಹಾವಿಪತ್ತು ಬಂದಿರುವುದು. ನನ್ನನ್ನು ಸಂರಕ್ಷಿಸು. ನಾನು ನಿನ್ನನ್ನು ವಿವಾಹಮಾಡಿಕೊಂಡು ನಿನ್ನ ಸೇವೆಯಲ್ಲಿ ಧುರಂಧರನಾಗಿರುತ್ತೇನೆ.

**ಕಲಾವತಿ**—ನೀನು ಮಹಾ ದುಷ್ಟನು. ನನ್ನ ತಂದೆಯನ್ನು ಚಮತ್ಕಾರದಿಂದ ಕೊಂದೆ. ಆತನು ಬರೆದಿಟ್ಟಿದ್ದ ಉಯಿಲನ್ನು ಅಪಹರಿಸಿದೆ. ನನ್ನ ಕತ್ತನ್ನು ಕಿವುಚಿದೆ. ದೈವಾಧೀನದಿಂದ ನಾನು ಬದುಕಿದೆನು. ಹಾಗಿಲ್ಲದಿದ್ದರೆ, ನೀನು ಉಯಿಲನ್ನು ಅಪಹರಿಸಿದ ದಿವಸವೇ ನನಗೂ ಮರಣವುಂಟಾಗು

ತಿತ್ತು. ಇಂಥ ಚಂಡಾಲನಾದ ನಿನ್ನ ಮಾತಿನಲ್ಲಿ ನಂಬಿಕೆಯನ್ನು ಯಾರು ಇಡುವರು? ಇಗೋ ನಿನ್ನನ್ನು ಯಮಪುರಿಗೆ ಕಳುಹಿಸುತ್ತೇನೆ, ಸಿದ್ಧನಾಗು.

ಎಂದು ಪಿಸ್ತೂಲನ್ನು ಹಾರಿಸುವುದರೊಳಗಾಗಿಯೇ, ಶಂಬರನು ಹುಲಿಯಂತೆ ಅವಳಮೇಲೆ ಬಿದ್ದು ಆ ಪಿಸ್ತೂಲನ್ನು ಕಿತ್ತುಕೊಂಡು, ಅದನ್ನು ಅವಳಮೇಲೆ ಹಾರಿಸಿದನು. ದೈವಾಧೀನದಿಂದ ಗುರಿಯು ತಪ್ಪಿತು. ಇನ್ನೊಂದಾವೃತ್ತಿ ಹೊಡೆಯುವುದರೊಳಗಾಗಿಯೇ, ಒಂದು ಗುಂಡಿನ ಶಬ್ದ ವಾಯಿತು. ಇವನು ಕಲಾವತಿಯ ಮೇಲೆ ಬಿದ್ದುದನ್ನು ನೋಡಿ, ಆಕೆಯನ್ನು ಬದುಕಿಸಬೇಕೆಂದು ಪರಂತಪನು ಈ ಗುಂಡನ್ನು ಬಿಟ್ಟನು. ಇದು ಶಂಬರನ ತಲೆಗೆ ತಗುಲಿ, ತಲೆಯೆಲ್ಲ ಸಹಸ್ರಹೋಳಾಗಿ ಭೇದಿಸಲ್ಪಟ್ಟಿತು. ಶಂಬರನು ಮಾಡಿದ್ದ ಅನೇಕ ಖೂನಿಗಳ ರುಜುವಾತನ್ನು ಬರಮಾಡಿಕೊಂಡು ಅವನನ್ನು ವಿಚಾರಣೆಗೆ ಗುರಿಮಾಡಬೇಕೆಂದು, ಸಮರಸಿಂಹ ಮಂಜೀರಕರು ಪ್ರಯತ್ನಮಾಡುತ್ತಿದ್ದರು. ಅಷ್ಟರಲ್ಲಿಯೇ ಶಂಬರನು ಮೃತಪಟ್ಟದ್ದರಿಂದ, ಈ ವಿದ್ಯಮಾನಗಳನ್ನೆಲ್ಲ ಸಮರಸಿಂಹನು ಆ ಸಂಸ್ಥಾನದ ಪ್ರಭುವಿಗೆ ತಿಳಿಸಿದನು. ಅವನು ಇವರ ಆಶ್ಚರ್ಯಕರವಾದ ಕಥೆಯನ್ನು ಕೇಳಿ, ಕಾಮಮೋಹಿನಿಯ ಪಾತಿವ್ರತ್ಯಕ್ಕೂ ಕಲಾವತಿಯ ಸಾಹಸಕ್ಕೂ ಮೆಚ್ಚಿ, ಅವರವರ ಆಸ್ತಿಗಳನ್ನು ಅವರವರಿಗೆ ಕೊಡಿಸಿ, ಪರಂತಪ ಸಮರಸಿಂಹ ಮಂಜೀರಕರಿಗೆ ಬಹಳ ಮರ್ಯಾದೆಯನ್ನು ಮಾಡಿ ಕಳುಹಿಸಿಕೊಟ್ಟನು. ಪರಂತಪ ಕಾಮಮೋಹಿನಿಯರು ತಮಗೆ ಆದ ವಿಪತ್ಪರಿಹಾರಾರ್ಥವಾಗಿ ದೇವತಾರಾಧನೆಯನ್ನು ಮಾಡಿಸಿದ್ದಲ್ಲದೆ, ಮಾಧವಸಿಂದ ಪ್ರಾಪ್ತವಾಗಿದ್ದ ಉಯಿಲಿಗೆ ಅನುಸಾರವಾಗಿ ಧರ್ಮಗಳೆಲ್ಲ ನಡೆಯುವಂತೆ ಏರ್ಪಾಡುಮಾಡಿ, ಅದರ ಮೇಲುವಿಚಾರಣೆಯನ್ನು ಬಹುದಿವಸದವರೆಗೂ ತೆಗೆದುಕೊಳ್ಳುತ್ತ ಪರೋಪಕಾರೈಕಪರಾಯಣರಾಗಿದ್ದರು.

ಕಲಾವತಿಯು, ಕಾಮಮೋಹಿನಿಯೊಡನೆ ಕೆಲವುದಿವಸಗಳು ರತ್ನಾಕರದಲ್ಲಿಯೇ ಇದ್ದಳು. ಅಷ್ಟರಲ್ಲಿಯೇ, ಮಂಜೀರಕನಿಗೂ ಕಲಾವತಿಗೂ ಪರಸ್ಪರ ಅನುರಾಗವುಂಟಾಯಿತು. ಆಗ ಪರಂತಪನು ಇವರಿಗೆ ವಿವಾಹವನ್ನು ಮಾಡಿಸಿ, ಸುಮಿತ್ರನ ಆಸ್ತಿಯನ್ನೆಲ್ಲ ಇವರಿಗೆ ಕೊಟ್ಟು, ಸುಖವಾಗಿ ಬದುಕುವಂತೆ ಏರ್ಪಾಡುಮಾಡಿದನು.